ISBN 81-237-0871-8

ಮೊದಲ ಮುದ್ರಣ: 1976 (ಶಕ 1898)
ತೃತೀಯ ಮುದ್ರಣ: 1994 (ಶಕ 1915)

ರೂ. 7.50

The Prince of Ayodhya (Kannada)

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ,
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ - 110016
ಇವರಿಂದ ಪ್ರಕಟಿತ



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ನೆಹರೂ ಬಾಲ ಪುಸ್ತಕಾಲಯ

# ಅಯೋಧ್ಯೆಯ ರಾಜಕುಮಾರ

ಅನುವಾದ

ಎಲ್. ಎಸ್. ಶೇಷಗಿರಿ ರಾವ್

ಚಿತ್ರಗಳು

ಸುಕುಮಾರ್ ಚಾಟರ್ಜಿ





## ರಾಮನ ಜನನ ಮತ್ತು ಮದುವೆ

ಬಹು ಕಾಲದ ಹಿಂದೆ, ಸರಯೂ ನದಿಯ ತೀರದಲ್ಲಿ ಒಂದು ಸುಂದರವಾದ ನಗರವಿತ್ತು. ಅದರ ಹೆಸರು ಅಯೋಧ್ಯೆ. ನದಿಯ ಅಲೆಗಳು ದಡವನ್ನು ಮುಟ್ಟಿ ಮುದ್ದಾಡುತ್ತಿದ್ದುವು, ಕನ್ನಡಿಯಂತಹ ನೀರಿನಲ್ಲಿ ಕಾಣುತ್ತಿದ್ದ ವನಗಳು ತೋಪುಗಳು ಅರಮನೆಗಳು ಮತ್ತು ಬೆಳೆ ತುಂಬಿದ ಹೊಲಗಳ ಪ್ರತಿಬಿಂಬಗಳೊಡನೆ ಆಡುತ್ತಿದ್ದುವು. ದಶರಥ ಈ ರಾಜ್ಯದ ರಾಜ. ಅವನಿಗೆ ಮೂವರು ರಾಣಿಯರು—ಕೌಸಲ್ಯೆ, ಸುಮಿತ್ರೆ ಮತ್ತು ಕೈಕೆಯಿ. ಕಿರಿಯವಳಾದ ಕೈಕೆಯಿಯೇ ರಾಜನಿಗೆ ಅಚ್ಚುಮೆಚ್ಚು.

ದಶರಥನಿಗೆ ಐಶ್ವರ್ಯವಿತ್ತು. ಜನರಿಗೆ ಅವನಲ್ಲಿ ಬಹು ಪ್ರೀತಿ. ಇಷ್ಟಾದರೂ ಅವನಿಗೆ ಸುಖವಿರಲಿಲ್ಲ. ಏಕೆಂದರೆ ಅವನಿಗೆ ಮಕ್ಕಳಿರಲಿಲ್ಲ. ಒಂದು

ದಿನ ವಸಿಷ್ಠ ಋಷಿ ಅವನಿಗೆ, "ನೀನು ಪುತ್ರಕಾಮೇಷ್ಟಿ ಯಾಗವನ್ನು ಮಾಡಿದರೆ ನಿನ್ನ ಆಸೆ ಫಲಿಸುತ್ತದೆ" ಎಂದು ಹೇಳಿದ. ಋಷಿ ಹೇಳಿದಂತೆಯೇ ದಶರಥನು ಮಾಡಿದ. ಸ್ವಲ್ಪ ಕಾಲ ಕಳೆದ ಮೇಲೆ ಮೂವರು ರಾಣಿಯರಿಗೂ ಗಂಡು ಮಕ್ಕಳಾದರು. ಚೈತ್ರ ಮಾಸದ ನವಮಿಯ ದಿನ ಕೌಸಲ್ಯೆ ರಾಮನಿಗೆ ಜನ್ಮವಿತ್ತಳು. ಸ್ವಲ್ಪ ಕಾಲದ ನಂತರ ಕೈಕೆಯಿ ಭರತನನ್ನು ಹೆತ್ತಳು. ಕಡೆಯಲ್ಲಿ ಸುಮಿತ್ರೆಗೆ ಲಕ್ಷ್ಮಣ ಮತ್ತು ಶತ್ರುಘ್ನರೆಂಬ ಅವಳೀ ಮಕ್ಕಳಾದರು. ಅಯೋಧ್ಯೆಯಲ್ಲಿ ಸಂತೋಷವೇ ಸಂತೋಷ, ಸಂಭ್ರಮವೇ ಸಂಭ್ರಮ. ದಶರಥನು ಬಡಬಗ್ಗರಿಗೆ ಅನ್ನದಾನ ಮಾಡಿದ, ಬಟ್ಟೆಯನ್ನೂ ಹಣವನ್ನೂ ದಾನ ಮಾಡಿದ.

ನಾಲ್ವರು ರಾಜಕುಮಾರರೂ ವನಗಳಲ್ಲಿ ಮತ್ತು ಅರಮನೆಗಳಲ್ಲಿ ಸಂತೋಷದಿಂದ ಆಟವಾಡಿಕೊಂಡು ಬೆಳೆದರು. ಅವರಲ್ಲಿ ಒಬ್ಬರಿಗೊಬ್ಬರಿಗೆ ಬಹಳ ಪ್ರೀತಿ. ರಾಮ ಲಕ್ಷ್ಮಣರು ಒಬ್ಬರನ್ನೊಬ್ಬರು ಬಿಟ್ಟಿರಲಾರರು; ಭರತ ಮತ್ತು ಶತ್ರುಘ್ನರೂ ಹಾಗೆಯೇ. ರಾಜನಿಗೆ ನಾಲ್ಕು ಜನ ರಾಜಕುಮಾರರಲ್ಲಿ ರಾಮನೆಂದರೆ ಬಹು ಪ್ರೀತಿ.

ರಾಜಕುಮಾರರು ದೊಡ್ಡವರಾದಾಗ ಅವರಿಗೆ ಶಾಸ್ತ್ರಗಳ ಪಾಠವಾಯಿತು. ಶಸ್ತ್ರಾಭ್ಯಾಸ ಆಯಿತು.





ಅವರಿಗೆ ಸುಮಾರು ಹದಿನಾರು ವರ್ಷ ವಯಸ್ಸಾಯಿತು. ಒಂದು ದಿನ ಋಷಿ ವಿಶ್ವಾಮಿತ್ರ ದಶರಥನ ಆಸ್ಥಾನಕ್ಕೆ ಬಂದನು. ವಿಶ್ವಾಮಿತ್ರ ಹಿಂದೆ ಬಹು ಬಲಿಷ್ಠ ರಾಜನಾಗಿದ್ದ. ಆದರೆ ರಾಜ್ಯವನ್ನು ತ್ಯಾಗಮಾಡಿ, ಋಷಿಯ ಜೀವನವನ್ನು ನಡೆಸುತ್ತಿದ್ದ.

ದಶರಥನು ಅವನನ್ನು ತುಂಬ ವಿಶ್ವಾಸದಿಂದ ಸ್ವಾಗತಿಸಿದ. "ಮಹರ್ಷಿಗಳೇ. ತಾವು ಬಂದದ್ದೇ ನನಗೆ ಗೌರವ. ನಾನು ತಮಗೆ ಹೇಗೆ ಸೇವೆ ಮಾಡಲಿ? ನಿಮ್ಮ ಅಪೇಕ್ಷೆ ಎಷ್ಟು ಸಣ್ಣದಾದರೂ ಅದನ್ನು ನಡೆಸಿಕೊಡುವುದೇ ನನಗೆ ಹೆಮ್ಮೆ ಮತ್ತು ಸಂತೋಷ."

ವಿಶ್ವಾಮಿತ್ರ ಹೇಳಿದ: "ನಾನು ಏನನ್ನು ಕೇಳಲು ಬಂದಿರುವೆನೋ ಅದನ್ನು ಕೊಡುವುದು ನಿನಗೆ ಸುಲಭವಾಗದಿರಬಹುದು."

ಹೆಮ್ಮೆಯಿಂದ ದಶರಥ ಉತ್ತರಿಸಿದ, "ನಿಮ್ಮ ಅಪೇಕ್ಷೆಯನ್ನು ದಶರಥನು ನಡೆಸಿಕೊಡದೆ ಹೋಗುವುದೇ ಇಲ್ಲ. ನೀವು ಹೇಳಿದರೆ ಸಾಕು, ನಿಮ್ಮ ಅಪೇಕ್ಷೆ ನಡೆದಂತೆಯೇ."

ಮುಗುಳ್ನಗೆ ನಕ್ಕು ವಿಶ್ವಾಮಿತ್ರ ಹೇಳಿದ: "ನಿನ್ನ ಮಗ ರಾಮನನ್ನು ನನಗೆ ಕೊಡು. ನಾನೊಂದು ಧಾರ್ಮಿಕ ಕಾರ್ಯ ನಡೆಸಲು ಸಂಕಲ್ಪ ಮಾಡಿದ್ದೇನೆ. ರಾಕ್ಷಸರು ಬಂದು ಹಿಂಸಿಸುತ್ತಾರೆ. ನನ್ನ ಸಿದ್ಧತೆಗಳನ್ನೆಲ್ಲ ಮೈಲಿಗೆ ಮಾಡುತ್ತಾರೆ. ಅವರನ್ನು ನಾಶ ಮಾಡಲು ನನಗೆ ರಾಮನ ಸಹಾಯ ಬೇಕು."



ದಶರಥನಿಗೆ ಕಳವಳವಾಯಿತು. "ರಾಮನೆ? ರಾಮನಿಗಿನ್ನೂ ಹದಿನಾರು ವರ್ಷ ಗಳೂ ಆಗಿಲ್ಲವಲ್ಲ! ಆ ಭಯಂಕರ ರಾಕ್ಷಸರ ಜೊತೆಗೆ ಅವನು ಹೇಗೆ ಹೋರಾಡಿಯಾನು? ನಾನೇ ಬರುತ್ತೇನೆ ಅಥವಾ ನನ್ನ ಸೈನ್ಯವನ್ನು ಕಳುಹಿಸುತ್ತೇನೆ. ಅಪ್ಪಣೆ ಕೊಡಿ. ಮಹರ್ಷಿ ಗಳೆ, ರಾಮನನ್ನು ಬಿಟ್ಟು ಏನನ್ನಾದರೂ ಕೇಳಿ."

ವಿಶ್ವಾಮಿತ್ರನಿಗೆ ಬಹಳ ಕೋಪ ಬಂದಿತು. "ಹಾಗಾದರೆ, ಅಷ್ಟೆಲ್ಲ ಮಾತು ಕೊಟ್ಟು ಈಗ ನಾನು ಬೇಡಿದುದನ್ನು ಕೊಡುವುದಿಲ್ಲ ಎನ್ನುತ್ತೀಯಾ? ಅಸಾಧ್ಯವಾದುದೇನನ್ನೂ ನಾನು ಕೇಳಲಿಲ್ಲ. ನಾನು ಋಷಿಯಾಗಿರಲು ತೀರ್ಮಾನಿಸದೆ ಇದ್ದಿದ್ದರೆ ನಾನೇ ರಾಕ್ಷಸರನ್ನು ಕೊಲ್ಲುತ್ತಿದ್ದೆ!"

ಇನ್ನು ಕಷ್ಟ ಬಂದೀತು ಎಂದು ವಸಿಷ್ಠರು ಹೆದರಿದರು. ಅವರು ದಶರಥನಿಗೆ, "ಮಹಾ ರಾಜ, ನೀನು ರಘುವಿನ ವಂಶದವನು, ಆಡಿದ ಮಾತನ್ನು ಉಳಿಸಿಕೊಳ್ಳಬೇಕು. ಹೆದರಬೇಡ. ವಿಶ್ವಾಮಿತ್ರರ ಜೊತೆಯಲ್ಲಿ ರಾಮನು ಕ್ಷೇಮವಾಗಿರುತ್ತಾನೆ, ಅವರಿಂದ ಎಷ್ಟೋ ವಿದ್ಯೆ ಯನ್ನು ಕಲಿಯುತ್ತಾನೆ," ಎಂದು ಹೇಳಿದರು.

ದಶರಥನಿಗೆ ಸಮಾಧಾನವಾಗಲಿಲ್ಲ. ಆದರೆ ಇನ್ನು ವಿಶ್ವಾಮಿತ್ರರ ಅಪೇಕ್ಷೆಯನ್ನು ಒಪ್ಪದಿರುವಂತಿರಲಿಲ್ಲ. "ಲಕ್ಷ್ಮಣನೂ ಜೊತೆಯಲ್ಲಿ ಹೋಗಲಿ" ಎಂದನು.

ರಾಜಕುಮಾರರಿಬ್ಬರೂ ತಂದೆತಾಯಿಗಳಿಂದ ಬೀಳ್ಕೊಂಡು ವಿಶ್ವಾಮಿತ್ರನ ಜೊತೆಯಲ್ಲಿ



ಹೊರಟರು. ಸ್ವಲ್ಪ ಕಾಲದಲ್ಲಿ ಕಪ್ಪಾದ, ಅನಿಷ್ಟ ಸೂಚಕವಾದ ನೆರಳುಗಳು ತುಂಬಿದ ಘೋರ ಭಯಂಕರ ಪ್ರದೇಶಕ್ಕೆ ಬಂದರು.

"ರಾಕ್ಷಸಿ ತಾಟಕಿ ವಾಸಮಾಡುವುದು ಇಲ್ಲಿ," ಋಷಿ ಹೇಳಿದ. "ಸುತ್ತಮುತ್ತಲಿನ ಎಲ್ಲ ಪ್ರಾಣಿಗಳನ್ನೂ ಅವಳು ಕೊಂದುಹಾಕಿದ್ದಾಳೆ. ಇಲ್ಲಿ ಬರುವ ಪ್ರಯಾಣಿಕರ ಮೇಲೆ ಬೀಳುತ್ತಾಳೆ. ಅವಳು ಬದುಕಿರಬಾರದು. ರಾಮ, ಅವಳನ್ನು ಕೊಂದು ಈ ಗ್ರಾಮಪ್ರದೇಶವನ್ನು ಜನರಿಗೆ ನಿರಾತಂಕವಾಗಿ ಮಾಡು."

ಅವರು ಮಾತನಾಡುತ್ತಿರುವಾಗಲೆ ತಾಟಕಿ ಕಾಣಿಸಿಕೊಂಡಳು, ಭಯಂಕರವಾಗಿ ಗರ್ಜಿಸುತ್ತ ಅವರತ್ತ ನುಗ್ಗಿದಳು. ರಾಮ ಲಕ್ಷ್ಮಣರು ಹೋರಾಡಿ ಅವಳನ್ನು ಕೊಂದರು. ವಿಶ್ವಾಮಿತ್ರನಿಗೆ ಬಹಳ ಸಂತೋಷವಾಯಿತು. ಅವರಿಗೆ ವಿಶೇಷ ಅಸ್ತ್ರಗಳನ್ನು ಕೊಟ್ಟು, ಅವನ್ನು ಉಪಯೋಗಿಸುವುದು ಹೇಗೆ ಎಂದು ಹೇಳಿಕೊಟ್ಟನು. ಕಡೆಗೆ ಮೂವರೂ ವಿಶ್ವಾಮಿತ್ರರ ಆಶ್ರಮವಾದ ಸಿದ್ಧಾಶ್ರಮವನ್ನು ತಲುಪಿದರು.

ಎಚ್ಚರದಿಂದ ಕಾವಲಿರುವಂತೆ ರಾಜಕುಮಾರರಿಗೆ ಹೇಳಿ, ಋಷಿ ತನ್ನ ಧಾರ್ಮಿಕ ಕಾರ್ಯಗಳನ್ನು ಪ್ರಾರಂಭಿಸಿದ. ಮೊದಲು ಎಲ್ಲ ನಿರಾತಂಕವಾಗಿ ಕಳೆಯಿತು; ಆದರೆ ಆರನೆಯ ದಿನ ರಾಕ್ಷಸರು ಬಂದೇ ಬಂದರು. ಸುಬಾಹು ಮತ್ತು ಮಾರೀಚ ಎಂಬವರು ಅವರ ನಾಯಕರು. ಭಯದ ಸೂಚನೆಯೂ ಇಲ್ಲದೆ ರಾಮನು ಅಸುರರನ್ನು ಎದುರಿಸಿದನು. ಬಿಲ್ಲನ್ನು ಎತ್ತಿ ಮಾರೀಚನ ಕಡೆಗೆ ಬಾಣವನ್ನು ಬಿಟ್ಟನು. ಬಾಣ ನೇರವಾಗಿ ಗುರಿಯನ್ನು ಮುಟ್ಟಿತು. ಅವರ ಶಕ್ತಿ ಮಾರೀಚನನ್ನು ಬಹುದೂರ ನೂಕಿತು. ರಾಮನು ಮತ್ತೊಂದು ಬಾಣವನ್ನು ಬಿಲ್ಲಿಗೆ ಹೂಡಿ ಬಿಟ್ಟ, ಬಾಣ ಸುಬಾಹುವನ್ನು ಕೊಂದಿತು. ಉಳಿದ ರಾಕ್ಷಸರು ಭಯಂಕರವಾಗಿ ಅರಚುತ್ತ ತಮ್ಮ ಜೀವಗಳನ್ನು ಉಳಿಸಿಕೊಳ್ಳಲು ಓಡಿಹೋದರು.

ವಿಶ್ವಾಮಿತ್ರನ ಧಾರ್ಮಿಕ ಕಾರ್ಯಗಳು ಶಾಂತವಾಗಿ ಮುಗಿಯುವುದು ಸಾಧ್ಯವಾಯಿತು. ತನ್ನ ಮಹತ್ಕಾರ್ಯವನ್ನು ಸಾಧಿಸಿದ ರಾಮನು, "ಪೂಜ್ಯರೇ, ನಾವು ಮತ್ತಾವ ರೀತಿಯಲ್ಲಿ ಯಾದರೂ ತಮ್ಮ ಸೇವೆ ಮಾಡಬಹುದೆ. ದಯೆಯಿಟ್ಟು ಅಪ್ಪಣೆ ಮಾಡಿ" ಎಂದನು.

ಋಷಿಯು ಉತ್ತರ ಹೇಳಿದ: "ನಿಮ್ಮಿಬ್ಬರ ವಿಷಯದಲ್ಲಿ ಸುಪ್ರೀತನಾಗಿದ್ದೇನೆ. ನೀವಿಬ್ಬರೂ ನನ್ನ ಜೊತೆಗೆ ವಿದೇಹ ರಾಜ ಜನಕನ ಆಸ್ಥಾನಕ್ಕೆ ಬರಬೇಕೆಂದು ನನ್ನ ಅಪೇಕ್ಷೆ. ಬಹು ವೈಭವದ ಯಜ್ಞ ಒಂದನ್ನು ಅವನು ನಡೆಸುವುದರಲ್ಲಿದ್ದಾನೆ. ನನ್ನ ಶಿಷ್ಯರೊಡನೆ ನಾನು ಹೋಗುತ್ತೇನೆ. ನನ್ನ ಜೊತೆಗೆ ಬನ್ನಿ. ಜನಕನ ಆಶ್ಚರ್ಯಕರವಾದ ಬಿಲ್ಲು ಹರಧನುಸ್ಸನ್ನು ನೋಡಿ."



ಅವರೆಲ್ಲ ವಿದೇಹಕ್ಕೆ ಹೋದರು. ಜನಕನು ಅತಿಥಿಗಳನ್ನು ಸ್ವಾಗತಿಸಿದ. "ಮಹರ್ಷಿಗಳೇ, ಈ ಸುಂದರ ತರುಣರು ಯಾರು?" ಎಂದು ಕೇಳಿದ.

"ಅವರು ಅಯೋಧ್ಯೆಯ ರಾಜ ದಶರಥನ ಮಕ್ಕಳು. ರಾಮಲಕ್ಷ್ಮಣರು. ಬೆರಗು ಪಡಿಸುವ ನಿನ್ನ ಹರಧನುಸ್ಸನ್ನು ನೋಡಲಿ ಎಂದು ಕರೆದುಕೊಂಡು ಬಂದಿದ್ದೇನೆ."



ತರುಣ ರಾಜಕುಮಾರರಿಗೆ ತೋರಿಸಲು ಹರಧನುಸ್ಸನ್ನು ತರುವಂತೆ ಜನಕನು ಸೇವಕರಿಗೆ ಅಪ್ಪಣೆ ಮಾಡಿದನು.

ಎಂಟು ಚಕ್ರಗಳ ಗಾಡಿಯಲ್ಲಿ ಒಂದು ದೊಡ್ಡ ಕಬ್ಬಿಣದ ಪೆಟ್ಟಿಗೆಯಲ್ಲಿತ್ತು ಧನುಸ್ಸು; ಗಾಡಿಯನ್ನು ಬಲಿಷ್ಠ ಮನುಷ್ಯನೊಬ್ಬ ನೂಕಿಕೊಂಡು ಬಂದ.

ಜನಕನು ವಿಶ್ವಾಮಿತ್ರನಿಗೆ ಹೇಳಿದ: "ಈ ಬಿಲ್ಲನ್ನು ಬಾಗಿಸಿ ಹೆದೆ ಏರಿಸಬಲ್ಲ ವೀರನಿಗೆ ನನ್ನ ಮಗಳು ಸೀತೆಯನ್ನು ಕೊಟ್ಟು ಮದುವೆ ಮಾಡುತ್ತೇನೆ ಎಂದು ಪ್ರತಿಜ್ಞೆ ಮಾಡಿದ್ದೇನೆ. ಪ್ರಸಿದ್ಧ ರಾಜಕುಮಾರರು ಎಷ್ಟೋ ಮಂದಿ ಪ್ರಯತ್ನಿಸಿದ್ದಾರೆ, ಸೋತಿದ್ದಾರೆ.

ನಿಮ್ಮ ತರುಣ ಸಂಗಾತಿಗಳಲ್ಲಿ ಯಾರಿಗಾದರೂ ಪ್ರಯತ್ನಿಸುವ ಇಷ್ಟವಿದೆಯೇನು?"

ವಿಶ್ವಾಮಿತ್ರನು ರಾಮನ ಕಡೆಗೆ ನೋಡಿದ. "ಬಾ, ಮಗೂ. ಹರಧನುಸ್ಸನ್ನೊಮ್ಮೆ ನೋಡು."

ರಾಮನು ಮುಂದಕ್ಕೆ ಬಂದು ಪೆಟ್ಟಿಗೆಯನ್ನು ತೆರೆದ. "ಅದನ್ನು ಎತ್ತಿ ಹೆದೆ ಏರಿಸಲೇ?" ಎಂದು ಕೇಳಿದ.

"ನಿನ್ನಿಂದ ಸಾಧ್ಯವಾದರೆ ಮಾಡು" ಎಂದ ಋಷಿ.

ರಾಮನು ಲೀಲಾಜಾಲವಾಗಿ ಬಿಲ್ಲನ್ನು ಎತ್ತಿದ. ಅದನ್ನು ಬಾಗಿಸಿ ಅವನು ಹೆದೆ ಏರಿಸಿದ ರಭಸಕ್ಕೆ ಬಿಲ್ಲು ಮಹಾ ಶಬ್ದದೊಡನೆ ಎರಡು ತುಂಡಾಗಿ ಮುರಿಯಿತು! ಎಲ್ಲರೂ ಬೆರಗು ಆಶ್ಚರ್ಯಗಳಿಂದ ರಾಮನನ್ನೆ ನೋಡಿದರು.

ಜನಕನಿಗೆ ತಡೆಯಲಾರದಷ್ಟು ಹಿಗ್ಗು. ಕಡೆಗೂ ಸೀತೆಗೆ ಯೋಗ್ಯನಾದ ವರನು ದೊರೆತನಲ್ಲ! ನಗರದಲ್ಲೆಲ್ಲ ಸಂಭ್ರಮವೇ ಸಂಭ್ರಮ. ದಶರಥನಿಗೆ ಶುಭವಾರ್ತೆಯನ್ನು ತಿಳಿಸಿ ಅವನ ಆಶೀರ್ವಾದವನ್ನು ಬೇಡಿ, ರಾಮ ಸೀತೆಯರ ವಿವಾಹಕ್ಕೆ ಅವನು ವಿದೇಹಕ್ಕೆ ಬರಬೇಕೆಂದು ಪ್ರಾರ್ಥಿಸಲು ದೂತರು ಹೊರಟರು.

ಭರತ ಶತ್ರುಘ್ನರನ್ನೂ ತನ್ನ ಪರಿವಾರವನ್ನೂ ಕರೆದುಕೊಂಡು ದಶರಥನು ಕೂಡಲೆ ಬಂದನು. ಸಂತೋಷ ಉಕ್ಕಿ ಹರಿಯಿತು. ನಾಲ್ವರು ರಾಜಕುಮಾರರಿಗೂ ವಧುಗಳು ದೊರೆತರು. ರಾಮನಿಗೆ ಸೀತೆಯನ್ನೂ ಲಕ್ಷ್ಮಣನಿಗೆ ಜನಕನ ಎರಡನೆಯ ಮಗಳು ಊರ್ಮಿಳೆಯನ್ನೂ, ಜನಕನ ತಮ್ಮ ಕುಶಧ್ವಜನ ಹೆಣ್ಣುಮಕ್ಕಳು ಮಾಂಡವಿ ಮತ್ತು ಶ್ರುತಕೀರ್ತಿಯರನ್ನೂ ಭರತ ಮತ್ತು ಶತ್ರುಘ್ನರಿಗೂ ಕೊಟ್ಟು ಮದುವೆಯಾಯಿತು.

ಜನಕನು ಸೀತೆಗೆ, "ನೀನು ಎಂದೂ ರಾಮನ ನೆರಳಾಗಿರುವಂತಾಗಲಿ" ಎಂದು ಆಶೀರ್ವದಿಸಿದನು. ಗಂಡಿನ ಕಡೆಯವರು ಅಯೋಧ್ಯೆಗೆ ಹಿಂದಿರುಗಿದರು. ಅಲ್ಲಿ ಅವರಿಗೆ ವೈಭವದ ಸ್ವಾಗತ.

ವರ್ಷಗಳು ಕಳೆದುವು. ರಾಜಕುಮಾರರು ಪರಾಕ್ರಮಿಗಳಾಗಿ ಕರ್ತವ್ಯನಿಷ್ಠರಾಗಿ ಬೆಳೆದರು. ದಶರಥ ಈಗ ಮುದುಕನಾಗಿದ್ದ, ರಾಜನಾಗಿ ತನ್ನ ಎಷ್ಟೋ ಕೆಲಸಗಳನ್ನು ರಾಮನಿಗೆ ವಹಿಸಿದ್ದ. ಅಯೋಧ್ಯೆಯ ಜನರಿಗೆ ರಾಮನೆಂದರೆ ಪ್ರೀತಿ, ಆಸ್ಥಾನದಲ್ಲಿ ಪ್ರತಿಯೊಬ್ಬರಿಗೂ ಹಾಗೆಯೇ. ದಶರಥನಿಗಂತೂ ರಾಮನೆಂದರೆ ತನ್ನ ಪ್ರಾಣಕ್ಕಿಂತ ಪ್ರೀತಿ.

ಶತ್ರುಘ್ನನನ್ನು ಕರೆದುಕೊಂಡು ಭರತನು ತನ್ನ ತಾತ, ಕೇಕೆಯ ರಾಜನನ್ನು ನೋಡಲು ಹೋದನು. ಆ ಹೊತ್ತಿನಲ್ಲಿ ರಾಮನನ್ನು ಯುವರಾಜ ಎಂದು ಘೋಷಿಸಲು ವೈಭವದ ಸಮಾರಂಭವನ್ನು ನಡೆಸಲು ದಶರಥನು ನಿಶ್ಚಯಿಸಿದ.

ದಶರಥನು ತನ್ನ ಮಂತ್ರಿಗಳನ್ನೂ ಸಾಮಂತರನ್ನೂ ಇತರ ರಾಜಮನೆತನಗಳವರನ್ನೂ ಕರೆಕಳುಹಿಸಿದ.

ಗಂಭೀರವಾದ ಧ್ವನಿಯಲ್ಲಿ ಅವನು ಅವರಿಗೆ ಹೇಳಿದ: "ಇಷ್ಟು ವರ್ಷಗಳೂ ನಾನು ನಿಮ್ಮ ರಾಜನಾಗಿ ನಿಮ್ಮನ್ನು ಕಾಪಾಡಿದ್ದೇನೆ. ನನಗೀಗ ವಯಸ್ಸಾಯಿತು, ಶಕ್ತಿ ಇಲ್ಲ, ನನಗೆ ವಿಶ್ರಾಂತಿ ಬೇಕು. ನನ್ನ ಮಗ ರಾಮ ನನ್ನ ನಂತರ ರಾಜನಾಗುವ ಯೋಗ್ಯತೆ ಪಡೆದಿದ್ದಾನೆ. ನೀವು ಒಪ್ಪುವುದಾದರೆ, ಅವನು ಯುವರಾಜನಾಗಿ ನನ್ನ ಕರ್ತವ್ಯಗಳನ್ನು ವಹಿಸಿಕೊಳ್ಳಬೇಕು ಎಂದು ನನ್ನ ಅಪೇಕ್ಷೆ. ನಾನು ಏನು ಮಾಡಬೇಕು ಎಂದು ನೀವು ಹೇಳಿ. ನಿಮ್ಮ ತೀರ್ಮಾನದಂತೆ ನಾನು ನಡೆಯುತ್ತೇನೆ."

ಜನರು, ಕಿವಿ ಕಿವುಡಾಗುವಂತೆ ಜಯಕಾರ ಮಾಡಿ ರಾಜ ದಶರಥನ ಮಾತುಗಳನ್ನು ಸ್ವಾಗತಿಸಿದರು. ರಾಜನು ಹೇಳಿದ: "ಪ್ರಜೆಗಳೇ, ಒಳ್ಳೆಯ ಕೆಲಸವನ್ನು ತಡವಿಲ್ಲದ ಮಾಡಬೇಕು. ಸಮಾರಂಭ ನಾಳೆ ಬೆಳಗ್ಗೆಯೇ ನಡೆಯಲಿ."

ಸುದ್ದಿ ವೇಗವಾಗಿ ಹಬ್ಬಿತು. ಸಂತೋಷದಿಂದ ಊರಿಗೆ ಹುಚ್ಚೇ ಹಿಡಿದಂತಾಯಿತು. ಆನಂದದ ಸಂಗತಿಯನ್ನು ಚರ್ಚೆ ಮಾಡುವ ಜನರಿಂದ ರಸ್ತೆಗಳು ತುಂಬಿಹೋದುವು. ಊರು ಅಲಂಕೃತವಾಯಿತು: ಮರುದಿನಕ್ಕಾಗಿ ಸಿದ್ಧತೆಗಳು ನಡೆದುವು.



# ಮಂಥರೆ ಮತ್ತು ಕೈಕೆಯಿ

ರಾಣಿ ಕೈಕೆಯಿಯ ಬಾಲ್ಯದ ದಾದಿ, ಗೂನು ಬೆನ್ನಿನ ಮಂಥರೆ ಅರಮನೆಯ ಮಾಳಿಗೆ ಯಿಂದ ಕೆಳಕ್ಕೆ ನೋಡಿದಳು. ರಸ್ತೆಗಳಲ್ಲೆಲ್ಲ ಆನಂದ ಸೂಸುವ ಅಲಂಕಾರವನ್ನು ಕಂಡಳು. ಧ್ವಜ ತೋರಣಗಳು ಮೇಲೇರುತ್ತಿದ್ದುವು. ರಸ್ತೆಗಳಲ್ಲಿ ಕಮಲದ ದಳಗಳನ್ನು ಚೆಲ್ಲು ತ್ತಿದ್ದರು. ಈ ಸಂಭ್ರಮಕ್ಕೆ ಕಾರಣವೇನು ಎಂದು ಅವಳಿಗೆ ಆಶ್ಚರ್ಯವಾಯಿತು. ಕೌಸಲ್ಯೆಯ ಸೇವಕಿಯನ್ನು ಕೇಳಿದಳು.

"ನಮ್ಮ ಪ್ರೀತಿಯ ರಾಮನಿಗೆ ನಾಳೆ ಬೆಳಗ್ಗೆ ಯುವರಾಜ ಪಟ್ಟಾಭಿಷೇಕವಾಗುತ್ತದೆ. ನಿನಗೆ ತಿಳಿಯದೇನು?" ಸೇವಕಿ ಕೇಳಿದಳು.

ರೋಷದಿಂದ ಉಬ್ಬುಸಪಡುತ್ತ ಮಂಥರೆ, ವಿಶ್ರಾಂತಿ ಪಡೆಯುತ್ತಿದ್ದ ಕೈಕೆಯಿಯ ಬಳಿಗೆ ಓಡಿಹೋದಳು.

"ಏಳೇಳು ಮೂರ್ಖಳೇ," ಮಂಥರೆ ಅರಚಿದಳು. "ನಿನ್ನ ಮೇಲೆ ಕವಿಯುತ್ತಿರುವ ಅಪಾಯ ನಿನಗೆ ಕಾಣಿಸುವುದಿಲ್ಲವೆ? ನಾಳೆ ರಾಮ ಯುವರಾಜನಾಗುತ್ತಾನೆ."

ಸುದ್ದಿ ಕೇಳಿ ಕೈಕೆಯಿಗೆ ತುಂಬ ಸಂತೋಷವಾಯಿತು. ಕೊರಳಲ್ಲಿದ್ದ ಸರವನ್ನು ತೆಗೆದು ಮಂಥರೆಗೆ ಕೊಡುತ್ತ, "ಮಂಥರೆ, ಎಷ್ಟು ಸೊಗಸಾದ ಸುದ್ದಿ ತಂದೆ! ರಾಮ ಬಹು ಒಳ್ಳೆಯ ರಾಜನಾಗುತ್ತಾನೆ. ನನಗೆ ಎಷ್ಟು ಸಂತೋಷವಾಗಿದೆಯೊ!" ಎಂದಳು.

ಇದರಿಂದ ಮಂಥರೆಯ ಕೋಪ ಇನ್ನೂ ಉಕ್ಕಿತು. ಅವಳು ಸರವನ್ನು ಬಿಸುಟಳು. "ನೀನು ಇಷ್ಟು ಮೂರ್ಖಳೆ! ರಾಮನು ರಾಜನಾದರೆ, ಭರತ ಅವನ ಸೇವಕನಾಗುತ್ತಾನೆ, ಕೈಕೆಯಿ ಕೌಸಲ್ಯೆಯ ದಾಸಿಯಾಗುತ್ತಾಳೆ, ಇಷ್ಟೂ ನಿನಗೆ ತಿಳಿಯುವುದಿಲ್ಲವೇ?" ಎಂದು ಅರಚಿದಳು.

ಕೈಕೆಯಿ ಖಂಡಿತವಾದ ಧ್ವನಿಯಲ್ಲಿ ಎಂದಳು: "ಅರ್ಥವಿಲ್ಲದ ಮಾತು! ರಾಮನಿಗೆ ನಾನೆಂದರೆ ಅವನ ತಾಯಿಯಲ್ಲಿ ಇರುವಷ್ಟೆ ಪ್ರೀತಿ. ಅವನ ತಮ್ಮಂದಿರಲ್ಲಿ ಅವನಿಗೆ ಬಹಳ ಆದರ. ಅಷ್ಟೇಕೆ, ರಾಮನ ನಂತರ ಭರತನೇ ರಾಜನಾಗುತ್ತಾನೆ."

ಮಂಥರೆ ತಿರಸ್ಕಾರದಿಂದ ನಕ್ಕುಬಿಟ್ಟಳು. "ಮೂರ್ಖ ಹೆಂಗಸೇ! ರಾಮನ ನಂತರ ಅವನ ಮಗ ರಾಜನಾಗುತ್ತಾನೆ; ಭರತನಲ್ಲ. ಭರತ ರಾಮನ ದಾಸನಾಗುತ್ತಾನೆ; ಪ್ರಾಯಶಃ ದೇಶಭ್ರಷ್ಟನಾಗಿ ಸಾಯುತ್ತಾನೆ. ನಿನಗೂ ಅದೇ ಬೇಕಾಗಿದ್ದರೆ ನಾನು ಇನ್ನೇನೂ ಹೇಳ ಬೇಕಾಗಿಲ್ಲ!"

ಈ ಮಾತುಗಳನ್ನು ಕೇಳಿ ಕೈಕೆಯಿಗೆ ದಿಗ್ಭ್ರಮೆಯಾಯಿತು. ಮಂಥರೆ ಹೀಗೆಯೇ ಮಾತನಾಡುತ್ತ ಹೋದಳು. ಕಡೆಗೆ ಕೈಕೆಯಿ, "ನನ್ನ ಭರತನನ್ನು ಉಳಿಸಲು ನಾನೇನು ಮಾಡಲಿ?" ಎಂದು ಕೇಳಿದಳು.

ಮಂಥರೆ ಕೂಡಲೆ ಉತ್ತರ ಹೇಳಿದಳು: "ಯುದ್ಧಭೂಮಿಯಲ್ಲಿ ನೀನು ರಾಜನ ಪ್ರಾಣ ವನ್ನು ಉಳಿಸಿದಾಗ ಅವನು ಎರಡು ವರಗಳನ್ನು ಕೊಡುತ್ತೇನೆ ಎಂದು ಹೇಳಿದ್ದ. ಜ್ಞಾಪಿಸಿಕೊ."



"ನಾನೇನು ವರಗಳನ್ನು ಕೇಳಲಿ? ನಾನು ಏನು ಹೇಳಬೇಕು?" ಕೈಕೆಯಿ ಏನೂ ತೋಚದೆ ಕೇಳಿದಳು.

"ಮೊದಲನೆಯದಾಗಿ, ರಾಮನ ಬದಲು ಭರತನೆ ಯುವರಾಜನಾಗಬೇಕು ಎಂದು ಕೇಳು. ಎರಡನೆಯದಾಗಿ ರಾಮನನ್ನು ಹದಿನಾಲ್ಕು ವರ್ಷ ಕಾಡಿಗೆ ಕಳುಹಿಸಬೇಕು ಎಂದು ಕೇಳು. ರಾಮನು ಹಿಂದಕ್ಕೆ ಬರುವ ಹೊತ್ತಿಗೆ ಜನ ಅವನನ್ನು ಮರೆತೇಬಿಟ್ಟಿರುತ್ತಾರೆ."

ಕೈಕೆಯಿ ಒಪ್ಪಿದಳು.

ಅಂದು ಸಂಜೆ ತನ್ನ ರಾಜಕಾರ್ಯಗಳನ್ನೆಲ್ಲ ಮುಗಿಸಿಕೊಂಡು ದಶರಥನು ಕೈಕೆಯಿಗೆ ಸಂತಸದ ಸುದ್ದಿಯನ್ನು ಹೇಳಬೇಕೆಂದು ರಾಣಿಯರ ಅಂತಃಪುರಕ್ಕೆ ಬಂದನು. ಅವಳಿಗೆ ರಾಮನೆಂದರೆ ಪ್ರೀತಿ, ಆದುದರಿಂದ ಅವಳಿಗೆ ಸಂತೋಷವಾಗಿಯೇ ಆಗುತ್ತದೆ ಎಂದು ಕೊಂಡಿದ್ದ ಅವನು. ಅವಳ ಕೊಠಡಿಯನ್ನು ಹೊಕ್ಕಾಗ ಕೈಕೆಯಿ ನೆಲದ ಮೇಲೆ ಮಲಗಿದ್ದು ದನ್ನು ಕಂಡ. ಅವಳ ಕೂದಲು ಕೆದರಿತ್ತು, ಆಭರಣಗಳು ಅವಳ ಸುತ್ತ ಚಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ನಿರಾಸೆಯ ಮೂರ್ತಿಯಾಗಿ ಕಂಡಳು ಅವಳು.

"ಏನಾಯಿತು?" ರಾಜ ಕೇಳಿದ. "ನಿನಗೆ ಮೈ ಸ್ವಸ್ಥವಿಲ್ಲವೇನು? ಆಸ್ಥಾನದ ವೈದ್ಯ ರನ್ನು ಕರೆಯಿಸಲೇ?"

ಕೈಕೆಯಿ ಮಾತನಾಡಲಿಲ್ಲ. ದಶರಥನ ಆತಂಕ ಹೆಚ್ಚಿತು. ಏನಾಗಿದೆ ಎಂದು ತನಗೆ ಹೇಳುವಂತೆ ಅವಳನ್ನು ಬೇಡಿಕೊಂಡ.

ಕಡೆಗೆ ಕೈಕೆಯಿ ಬಾಯಿಬಿಟ್ಟಳು: "ನನಗೇನೂ ಅನಾರೋಗ್ಯವಿಲ್ಲ. ನಾನು ಕೇಳಿದುದನ್ನು ಕೊಡುತ್ತೇನೆ ಎಂದು ಮಾತು ಕೊಡು."

"ರಾಮನಾಣೆ, ನೀನು ಏನು ಕೇಳಿದರೂ ಕೊಡುತ್ತೇನೆ" ಎಂದ ದಶರಥ.

"ನೀನು ಯುದ್ಧಭೂಮಿಯಲ್ಲಿ ಮಾತುಕೊಟ್ಟಂತೆ ಎರಡು ವರಗಳನ್ನು ಕೊಡು, ಇಲ್ಲ ವಾದರೆ ನಾನು ಪ್ರಾಣಬಿಡುತ್ತೇನೆ, ಇದು ನನ್ನ ಪ್ರತಿಜ್ಞೆ."

ದಶರಥ ಮುಗುಳ್ನಗೆ ನಕ್ಕ. "ನಿನಗೆ ಏನು ಬೇಕೋ ಕೇಳು, ದಶರಥನು ಕೊಟ್ಟ ಮಾತಿಗೆ ತಪ್ಪುವವನಲ್ಲ."

"ಭರತನನ್ನು ಯುವರಾಜನನ್ನಾಗಿ ಮಾಡು," ಕೈಕೆಯಿ ಎಂದಳು. ಅನಂತರ ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಹೇಳಿದಳು, "ಕಾಡಿನಲ್ಲಿ ಹದಿನಾಲ್ಕು ವರ್ಷಗಳ ಕಾಲ ಋಷಿ ಯಂತೆ ವಾಸವಾಗಿರುವಂತೆ ರಾಮನನ್ನು ರಾಜ್ಯದಿಂದ ಹೊರಕ್ಕೆ ಕಳಿಸು."

ದಶರಥನಿಗೆ ದಿಕ್ಕುಗಾಣದಾಯಿತು. ಅವನಿಗೆ ತನ್ನ ಕಿವಿಗಳನ್ನೇ ನಂಬಲಾರದಂತೆ ಆಯಿತು. "ರಾಮನನ್ನು ದೇಶಭ್ರಷ್ಟನಾಗಿ ಕಳಿಸುವುದೇ! ಜನರೆಲ್ಲ ಪೂಜಿಸುವ ನನ್ನ ಮುದ್ದು ಮಗನನ್ನು ದೇಶಭ್ರಷ್ಟನನ್ನಾಗಿ ಕಳಿಸುವುದೇ! ನೀನು ಏನು ಕೇಳುತ್ತಿದ್ದೀಯೆ. ಗೊತ್ತೆ ನಿನಗೆ? ಕಾರಣವಿಲ್ಲದೆ ಅವನನ್ನು ರಾಜ್ಯದಿಂದ ಅಟ್ಟುವುದೆ? ದುಷ್ಟ ಹೆಂಗಸೇ, ಬೇರೆ ಏನಾದರೂ ವರವನ್ನು ಕೇಳು."



ಆದರೆ ಕೈಕೆಯಿ ಅವನ ಮಾತನ್ನು ಕೇಳಲೊಲ್ಲಳು. ರಾಮನು ಹೋಗಲೇ ಬೇಕು, ಬೇರೆ ಏನಾದರೂ ಅವಳಿಗೆ ಸಮಾಧಾನವಿಲ್ಲ. ರಾತ್ರಿಯೆಲ್ಲ ದಶರಥನು ವಾದಿಸಿದ, ಬೇಡಿಕೊಂಡ, ಬೆದರಿಸಿದ. ಆದರೆ ಎಲ್ಲ ವ್ಯರ್ಥ. ಹೀಗೆ ರಾತ್ರಿ ಕಳೆಯಿತು. ಭವಿಷ್ಯವನ್ನು ನಿರ್ಧರಿಸುವ ಬೆಳಗೂ ಉದಿಸಿತು.



# ರಾಮನ ದೇಶತ್ಯಾಗ

ಮರುದಿನ ಬೆಳಗ್ಗೆ ರಾಜಗುರು ವಸಿಷ್ಠನು ಉತ್ಸವಕ್ಕೆ ಸಿದ್ಧತೆಗಳನ್ನು ಬೇಗನೆ ಪ್ರಾರಂಭಿಸಿದ. ತಮ್ಮ ಮೆಚ್ಚಿನ ರಾಜಕುಮಾರನು ಯುವರಾಜನಾಗುವುದನ್ನು ನೋಡಲು ಆತುರದಿಂದ ಸಡಗರದಿಂದ ಜನರ ಸಂದಣಿ ರಸ್ತೆಗಳಲ್ಲಿ ತುಂಬಿತು. ಶುಭಮುಹೂರ್ತ ಹತ್ತಿರವಾಯಿತು, ಆದರೆ? ಅರಸನೆಲ್ಲಿ?

ವಸಿಷ್ಠನಿಗೆ ಆತಂಕವಾಯಿತು. ಮಂತ್ರಿ ಸುಮಂತ್ರನಿಗೆ, "ಬೇಗನೆ ರಾಜಮಂದಿರಕ್ಕೆ ಹೋಗಿ, ಎಲ್ಲವೂ ಸಿದ್ಧವಾಗಿದೆ, ನಾವು ಅವನಿಗಾಗಿ ಕಾದಿದ್ದೇವೆ ಎಂದು ರಾಜನಿಗೆ ಹೇಳು" ಎಂದನು.

ಸುಮಂತ್ರನು ರಾಣಿ ಕೈಕೆಯಿಯ ಮಂದಿರಕ್ಕೆ ಧಾವಿಸಿದ. ಅಲ್ಲಿ ನೋಡುತ್ತಾನೆ, ಅರಸನು ತುಂಬ ಕಾಯಿಲೆ ಇರುವಂತೆ ಕಾಣುತ್ತಿದ್ದಾನೆ. ಹಾಸಿಗೆಯಲ್ಲಿ ಮಲಗಿದ್ದಾನೆ! ಸುಮಂತ್ರನಿಗೆ ಬಹು ಗಾಬರಿಯಾಯಿತು. ಕಳವಳದಿಂದ, 'ಏಕೆ, ಏನಾಯಿತು?' ಎಂದು ಕೇಳಿದ. ದುಃಖದಲ್ಲಿ ಮುಳುಗಿದ್ದ ರಾಜನಿಗೆ ಒಂದು ಮಾತನ್ನು ಆಡಲೂ ಆಗಲಿಲ್ಲ.

ಅವನ ಬದಲು ಕೈಕೆಯಿ ಉತ್ತರ ಕೊಟ್ಟಳು: "ಇವತ್ತಿನ ಉತ್ಸವದ ಸಡಗರದಲ್ಲಿ ಅವನಿಗೆ ನಿದ್ರೆಯೇ ಬರಲಿಲ್ಲ." ಮತ್ತೆ ಹೇಳಿದಳು: "ರಾಮನನ್ನು ಇಲ್ಲಿಗೆ ಕೂಡಲೇ ಕಳುಹಿಸು."

"ನಾನು ರಾಜನ ಅಪ್ಪಣೆಗಾಗಿ ಕಾದಿದ್ದೇನೆ", ಸುಮಂತ್ರ ಹೇಳಿದ.

"ಹೌದು, ರಾಮನನ್ನು ನನ್ನ ಹತ್ತಿರ ಕರೆದುಕೊಂಡು ಬಾ," ರಾಜನು ಕ್ಷೀಣವಾದ ಧ್ವನಿಯಲ್ಲಿ ಹೇಳಿದ.

ಏನೂ ಅರ್ಥವಾಗದೆ, ಆತಂಕವಾದ ಮನಸ್ಸಿನಿಂದ ಸುಮಂತ್ರನು ರಾಮನ ಅರಮನೆಗೆ ಹೊರಟ. ಅರಮನೆಯ ಮುಂದೆ ಜನರು ಒಳ್ಳೆಯ ಬಟ್ಟೆಗಳನ್ನು ಧರಿಸಿ ಸಂತೋಷದಿಂದ ಗುಂಪುಗುಂಪಾಗಿ ನಿಂತಿದ್ದರು. ಬಾಗಿಲಲ್ಲಿ ಲಕ್ಷ್ಮಣನು ನಿಂತಿದ್ದ. ಉತ್ಸವಕ್ಕೆ ಕರೆ ಬರುವುದನ್ನು ಕಾಯುತ್ತ, ಸೀತೆಯೊಡನೆ ರಾಮನಿದ್ದ ಅಂತಃಪುರವನ್ನು ಸುಮಂತ್ರ ಪ್ರವೇಶಿಸಿದ.

"ಪ್ರಭು, ರಾಜನು ನಿನ್ನನ್ನು ನಿರೀಕ್ಷಿಸುತ್ತಿದ್ದಾನೆ" ಎಂದು ಹೇಳಿದ.

ರಾಮನಿಗೆ ಆಶ್ಚರ್ಯವಾಯಿತು; ಲಕ್ಷ್ಮಣನನ್ನೂ ಕರೆದುಕೊಂಡು ಅರಮನೆಗೆ ಹೊರಟ.

ಉತ್ಸವದ ವಸ್ತ್ರಗಳಲ್ಲಿ ಅವನನ್ನು ಕಂಡ ಜನ ಸಂತೋಷದಿಂದ ಜಯಕಾರ ಮಾಡಿದರು. ಅವನು ಉತ್ಸವಕ್ಕೆ ಹೊರಟಿದ್ದಾನೆ ಎಂದೇ ಅವರ ಭಾವನೆ. ಅವನಿಗೆ ಮಂಗಳವಾಗಲೆಂದು ಅವರು ಹಾರೈಸಿದರು. ಹೆಂಗಸರು ಉಪ್ಪರಿಗೆಗಳಿಂದ ಹೂವುಗಳ ಮಳೆ ಸುರಿಸಿದರು.

ರಾಜಕುಮಾರರು ಕೈಕೆಯಿಯ ಮಂದಿರವನ್ನು ಪ್ರವೇಶಿಸಿ ತಂದೆಯ ಮುಂದೆ ನಿಂತರು. ಅವನ ಸ್ಥಿತಿಯನ್ನು ನೋಡಿ ಅವರಿಗೆ ಬಹು ಆಶ್ಚರ್ಯವಾಯಿತು. ಒಂದು ರಾತ್ರಿಯಲ್ಲಿ ಅವನಲ್ಲಿ ಇಷ್ಟು ಬದಲಾವಣೆಯಾಗುವಂತೆ ಏನು ನಡೆದಿರಬಹುದು! ಅವನು ಕಂಗೆಟ್ಟು ಹೋಗಿದ್ದ, ಆಯಾಸಗೊಂಡಿದ್ದ, ಸಂಕಟಪಡುತ್ತಿದ್ದ. ರಾಮನು ಮೊದಲು ರಾಜನಿಗೂ ಅನಂತರ ಕೈಕೆಯಿಗೂ ನಮಸ್ಕಾರ ಮಾಡಿದ.

ದುಃಖದಿಂದ ಕೊರಳು ಬಿಗಿಯುತ್ತಿದ್ದಂತೆ ದಶರಥನು, 'ರಾಮಾ!' ಎಂದ.

ಇದ್ದಕ್ಕಿದ್ದಂತೆ ಅಶುಭದ ಸೂಚನೆ ರಾಮನ ಮನಸ್ಸನ್ನು ಮುತ್ತಿತು. ಅವನೆಂದ: "ಹೇಳಿ ಅಪ್ಪಾ, ನಾನೇನಾದರೂ ತಪ್ಪನ್ನು ಮಾಡಿರುವೆನೆ?"

ದಶರಥನಿಗೆ ಮಾತನಾಡುವುದಕ್ಕೇ ಸಾಧ್ಯವಾಗಲಿಲ್ಲ. ರಾಮನು ಕೈಕೆಯಿಯತ್ತ ತಿರುಗಿ, "ನಾನೇನಾದರೂ ತಪ್ಪು ಮಾಡಿರುವೆನೆ, ಹೇಳಿ" ಎಂದು ಬೇಡಿಕೊಂಡ. "ತಂದೆ ಮಾತನಾಡುವುದಿಲ್ಲವಲ್ಲ. ಏಕೆ? ಅವನಿಗೆ ಅಷ್ಟು ಕಾಯಿಲೆಯೆ? ಅಥವಾ ನೀವೇನಾದರೂ ಕಠಿಣವಾಗಿ ಮಾತನಾಡಿ ಅವನ ಮನಸ್ಸನ್ನು ಕಲಕಿದ್ದೀರೊ?"

ಕೈಕೆಯಿ ಉತ್ತರಿಸಿದಳು: "ಇಲ್ಲ, ಅವನಿಗೆ ಕಾಯಿಲೆಯೂ ಇಲ್ಲ, ನಿನ್ನ ಮೇಲೆ ಕೋಪವೂ ಇಲ್ಲ. ಅವನ ಮನಸ್ಸಿನಲ್ಲಿರುವುದನ್ನು ನಿನಗೆ ಹೇಳಿದರೆ ನಿನಗೆ ಅಸಮಾಧಾನ ವಾದೀತು ಎಂದು ಅವನಿಗೆ ಹೆದರಿಕೆ."

"ಏನದು ಹೇಳಿ, ನಿಮ್ಮನ್ನು ಬೇಡಿಕೊಳ್ಳುತ್ತೇನೆ," ರಾಮನು ಅಂಗಲಾಚಿದ.

ರಾಣಿ ಹೇಳಿದಳು: "ಹಿಂದೆ ಅವನು ನನಗೆ ಎರಡು ವರಗಳನ್ನು ಕೊಡುತ್ತೇನೆ ಎಂದು ಮಾತು ಕೊಟ್ಟಿದ್ದ. ಆದರೆ ಇಂದು ನಾನು ಅವನ್ನು ಬೇಡಿದಾಗ ರಾಜನಿಗೆ ಉಚಿತವಲ್ಲದ ರೀತಿಯಲ್ಲಿ ನಡೆದುಕೊಂಡ. ರಾಜನಾದವನು ತನ್ನ ಮಾತನ್ನು ಉಳಿಸಿಕೊಳ್ಳಬೇಕು. ಅವನಿಗೆ ಈಗ ದುಃಖದಿಂದ, ಕೋಪದಿಂದ ಮಾತೇ ಹೊರಡುವುದಿಲ್ಲ. ಆದರೆ ಅವನು ಕೊಟ್ಟ ಭರವಸೆಗಳನ್ನು ನೀನು ನಡೆಸಿಕೊಡುತ್ತಿ ಎಂದು ನೀನು ಮಾತು ಕೊಟ್ಟರೆ, ನೀನು ಏನು ಮಾಡಬೇಕು ಎಂದು ಅವನ ಮನಸ್ಸಿನಲ್ಲಿದೆ ಎಂಬುದನ್ನು ನಾನು ಹೇಳುತ್ತೇನೆ."

"ರಾಜನು ಅಪ್ಪಣೆ ಮಾಡಿದರೆ ನಾನು ಬೆಂಕಿಯನ್ನೆ ಹೊಕ್ಕುತ್ತೇನೆ," ರಾಮ ಉತ್ತರ ಹೇಳಿದ. "ನಾನೇನು ಮಾಡಬೇಕು ಎಂದು ಅವನ ಇಚ್ಛೆ ಅದನ್ನು ಹೇಳಿ, ನಾನು ಮಾಡು ತ್ತೇನೆ. ನನ್ನ ಮಾತಿಗೆ ತಪ್ಪುವುದಿಲ್ಲ."

ಕೈಕೆಯಿ ಹೇಳಿದಳು: "ಭರತನು ಯುವರಾಜನಾಗಬೇಕು ಮತ್ತು ನೀನು ದೇಶತ್ಯಾಗ ಮಾಡಿ ಹದಿನಾಲ್ಕು ವರ್ಷಗಳ ಕಾಲ ಋಷಿಯಂತೆ ಕಾಡಿನಲ್ಲಿ ವಾಸ ಮಾಡಬೇಕು ಎಂದು ನನ್ನ ಇಷ್ಟ. ಇದರಿಂದಲೇ ರಾಜ ದುಃಖದಲ್ಲಿ ಮುಳುಗಿ ಮಾತನಾಡಲಾರದೆ ಇದ್ದಾನೆ"

ರಾಮನು ಯಾವ ಭಾವಗಳನ್ನೂ ತೋರಿಸಲಿಲ್ಲ. ಸಮಾಧಾನದಿಂದಲೇ ಮಾತನಾಡಿದ. "ಹಾಗೆಯೇ ಭರತನಿಗೆ ಪಟ್ಟಾಭಿಷೇಕವಾಗಲಿ, ನಾನು ಇಂದೇ ಕಾಡಿಗೆ ಹೊರಡುತ್ತೇನೆ."

ಕೈಕೆಯಿಗೆ ಅತ್ಯಾನಂದವಾಯಿತು. "ಹೌದು ಹೌದು," ಅವಳೆಂದಳು; "ತಡವಾಗುವುದು ಬೇಡ. ನೀನು ಹೊರಡುವ ವರೆಗೆ ನಿಮ್ಮ ತಂದೆ ಸ್ನಾನ ಮಾಡುವುದಿಲ್ಲ, ಊಟ ಮಾಡುವುದಿಲ್ಲ."



"ನಾಚಿಕೆಯಾಗುವುದಿಲ್ಲವೆ ನಿನಗೆ?" ಎಂದು ಉದ್ಗಾರ ಮಾಡುತ್ತ ಜ್ಞಾನ ತಪ್ಪಿ ಬಿದ್ದ ದಶರಥ.

ತಂದೆಗೆ ಸರಿಯಾಗಿ ಶುಶ್ರೂಷೆ ನಡೆಯುತ್ತಿದೆ ಎಂದು ಖಚಿತ ಮಾಡಿಕೊಂಡು ರಾಮನು ಕೈಕೆಯಿಯ ಕಡೆಗೆ ತಿರುಗಿದ. "ನನ್ನ ತಾಯಿಗೂ ಸೀತೆಗೂ ಹೇಳಿದವನೇ ನಾನು ಹೊರಡುತ್ತೇನೆ" ಎಂದು ಹೇಳಿದ. ಕೋಪದಿಂದ ಥರಥರನೆ ನಡುಗುತ್ತಿದ್ದ ಲಕ್ಷ್ಮಣನನ್ನು ಕರೆದುಕೊಂಡು ಅರಮನೆಯಿಂದ ಹೊರಟ.

ಜನರ ಗುಂಪುಗಳನ್ನು ತಪ್ಪಿಸಿ ಅವರು ಕೌಸಲ್ಯೆಯ ಮಂದಿರಕ್ಕೆ ಹೋದರು. ಉತ್ಸವಕ್ಕೆ ಸಿದ್ಧತೆಗಳಾಗುತ್ತಿದ್ದುದನ್ನೂ ಜನರ ಸಂಭ್ರಮವನ್ನೂ ಅವರು ದೂರದಿಂದಲೇ ಕಂಡರು. ರಾಮನು ಹೋಗುವಾಗ ನೋಡಿದವರು ಯಾರೂ ಏನು ನಡೆಯಿತು ಎಂಬುದನ್ನು ಊಹಿಸುವುದಕ್ಕೇ ಸಾಧ್ಯವಿರಲಿಲ್ಲ.





ರಾಜಕುಮಾರರು ಬಂದಾಗ ಕೌಸಲ್ಯ ಪೂಜೆ ಪ್ರಾರ್ಥನೆಗಳಲ್ಲಿ ತೊಡಗಿದ್ದಳು. ಅವರನ್ನು ಹರಸಲು ಸಂತೋಷದಿಂದ ಎದ್ದಳು; ಆದರೆ ನಡೆದ ಸಂಗತಿಯನ್ನು ಲಕ್ಷ್ಮಣನು ಹೇಳಿದ. ಕೇಳುತ್ತಲೆ ಮೂರ್ಛಿತಳಾಗಿ ಕೆಳಕ್ಕೆ ಬಿದ್ದಳು.

ಲಕ್ಷ್ಮಣನಿಗೆ ಆಗಲೇ ಕೋಪ ಬಂದಿತ್ತು; ಇದನ್ನು ನೋಡಿ ರಾಮನ ಕಡೆಗೆ ತಿರುಗಿ, "ಪ್ರಭೂ, ಯಾರಿಗೂ ಇನ್ನೂ ಏನೂ ತಿಳಿದಿಲ್ಲ. ಕಿರೀಟವನ್ನು ಈಗಲೇ ಕಿತ್ತುಕೊಂಡು ಬಿಡು. ನಿನ್ನನ್ನು ಯಾರಾದರೂ ವಿರೋಧಿಸಿದರೆ ನಾನು ಹೋರಾಡುತ್ತೇನೆ," ಎಂದ.

ಆದರೆ ರಾಮ ಈ ಮಾತನ್ನು ಕಿವಿಯ ಮೇಲೆ ಹಾಕಿಕೊಳ್ಳಲೇ ಇಲ್ಲ. "ಇಲ್ಲ ತಮ್ಮಾ", ಅವನೆಂದ, "ತಂದೆಯ ಮಾತನ್ನು ನಡೆಸಿಕೊಡುವುದು ನಮಗೆ ಧರ್ಮ"

ಇಷ್ಟು ಹೊತ್ತಿಗೆ ಕೌಸಲ್ಯೆಗೆ ಜ್ಞಾನ ಬಂದಿತ್ತು. "ನೀನು ಹೇಳಿದುದು ಸರಿಯೇ, ಮಗು. ಆದರೆ ನಾನೂ ನಿನ್ನ ಜೊತೆಗೇ ಬರುತ್ತೇನೆ. ಹಗಲು ರಾತ್ರಿ ಕೈಕೆಯಿಯಿಂದ ಅವಮಾನ ಪಡುತ್ತಾ ನಾನು ಇಲ್ಲಿ ಇರುವುದು ಹೇಗೆ?" ಎಂದಳು.

ರಾಮ ಹೇಳಿದ, "ರಾಜನಿಗೋಸ್ಕರ ನೀನು ಇಲ್ಲಿಯೇ ಇದ್ದು ಎಲ್ಲವನ್ನೂ ಸಹಿಸ ಬೇಕು. ಅವನಿಗೆ ನಿನ್ನ ನೆರವು ಬೇಕು. ಹದಿನಾಲ್ಕು ವರ್ಷಗಳು ಬೇಗ ಕಳೆದುಹೋಗುತ್ತವೆ, ನಾನು ಹಿಂದಕ್ಕೆ ಬರುತ್ತೇನೆ."

ಹಿಂದಲೇ ಕೌಸಲ್ಯೆ ಒಪ್ಪಿಕೊಂಡಳು, "ಹೋಗಿ ಬಾ, ಮಗು. ದೇವರು ನಿನಗೆ ಶುಭವನ್ನು ಮಾಡಲಿ. ನೀನು ಬರುವೆ ಎಂದೇ ನಾನು ಪ್ರಾಣವನ್ನು ಹಿಡಿದುಕೊಂಡಿರುತ್ತೇನೆ" ಎಂದು ಹೇಳಿ ಹರಸಿದಳು.

ಅಲ್ಲಿಂದ ರಾಜಕುಮಾರರು ಸೀತೆಯ ಮಂದಿರಕ್ಕೆ ಹೋದರು. ರಾಮನ ವೈಭವ ವನ್ನೆಲ್ಲ ನೋಡಬೇಕೆಂದು ಕಾಯುತ್ತಿದ್ದಳು ಅವಳು. ಆದರೆ ರಾಜಲಾಂಛನಗಳಿಲ್ಲದೆ ಅವನು ಬಂದ, ಅವನ ಮುಖ ಗಂಭೀರವಾಗಿತ್ತು. ಮುಖದಲ್ಲಿ ವ್ಯಸನವಿತ್ತು. ಅದನ್ನು ಕಂಡು ಅವಳು ಕಳವಳದಿಂದ, "ಏನಾಯಿತು ಪ್ರಭು, ಏಕೆ ಇಷ್ಟು ದುಃಖದಲ್ಲಿರುವಂತೆ ಕಾಣುತ್ತಿ?" ಎಂದು ಕೇಳಿದಳು.

ರಾಮನು ಹೇಳಿದ: "ಭರತನು ಯುವರಾಜನಾಗುತ್ತಾನೆ ಮತ್ತು ನಾನು ಋಷಿಯಂತೆ ಜೀವನ ನಡೆಸಲು ಹದಿನಾಲ್ಕು ವರ್ಷಗಳ ಕಾಲ ಕಾಡಿನಲ್ಲಿರುತ್ತೇನೆ ಎಂದು ನನ್ನ ತಂದೆ ಕೈಕೆಯಿಗೆ ಮಾತು ಕೊಟ್ಟಿದ್ದಾನೆ. ನಿನ್ನನ್ನು ಬೀಳ್ಕೊಳ್ಳಲು ಬಂದೆ, ಸೀತೆ. ನಾನು ಇಲ್ಲದಿರುವಾಗ ಭರತನಿಗೆ ಅಸಮಾಧಾನವಾಗುವಂತೆ ನೀನು ಏನನ್ನೂ ಮಾಡಬಾರದು. ಅವನು ರಾಜ, ಮರೆಯಬೇಡ."

ಕೋಪದಿಂದ ದುಃಖದಿಂದ ಸೀತೆ ಗಟ್ಟಿಯಾಗಿ ಹೇಳಿದಳು: "ಇಲ್ಲವೇ ಇಲ್ಲ, ನನಗೆ

ಅದನ್ನು ಸಹಿಸಲು ಸಾಧ್ಯವೇ ಇಲ್ಲ. ನೀನೊಬ್ಬನೇ ಹೋಗಲು ನಾನು ಬಿಡುವುದಿಲ್ಲ. ನಾನೂ ನಿನ್ನ ಜೊತೆ ಬರುತ್ತೇನೆ."

ದುಃಖದಲ್ಲಿಯೇ ರಾಮ ಮುಗುಳ್ನಗೆ ನಕ್ಕ. "ಪ್ರಿಯೇ, ಕಾಡಿನ ಜೀವನದ ಕಷ್ಟಗಳ ಕಲ್ಪನೆಯೇ ನಿನಗಿಲ್ಲ. ದಿನಗಟ್ಟಳೆ ಊಟವಿಲ್ಲದೆ, ನಿದ್ರೆ ಇಲ್ಲದೆ ಇರಬೇಕಾಗುತ್ತದೆ. ಕಲ್ಲು ಮುಳ್ಳುಗಳಿಂದ ನಿನ್ನ ಪಾದಗಳಲ್ಲಿ ರಕ್ತ ಬರುತ್ತದೆ. ಮಲಗಲು ಒತ್ತುವ ನೆಲ ಬಿಟ್ಟರೆ ಬೇರೇನೂ ಇರುವುದಿಲ್ಲ. ಅಂತಹ ಜೀವನಕ್ಕೆ ನಿನ್ನನ್ನು ಹೇಗೆ ಕರೆದುಕೊಂಡು ಹೋಗಲಿ, ಸೀತೆ?"

ಆದರೆ ಸೀತೆ ಮನಸ್ಸು ಬದಲಾಯಿಸಲು ಸಿದ್ಧವಿರಲಿಲ್ಲ. "ನೀನು ನನ್ನ ಜೊತೆಗಿದ್ದರೆ ಮುಳ್ಳೂ ಹೂವಿನಂತೆ ಇರುತ್ತದೆ. ನಿನ್ನನ್ನು ಕಾಣದೆ ಒಂದು ದಿನವೂ ಇರಲಾರೆ, ನೀನಿಲ್ಲದೆ ಹದಿನಾಲ್ಕು ವರ್ಷ ಬದುಕುವುದು ಹೇಗೆ?" ಬಿಕ್ಕಿ ಬಿಕ್ಕಿ ಅಳುತ್ತಾ ಅವಳೆಂದಳು, "ನಾನೂ ನಿನ್ನ ಜೊತೆ ಬರುತ್ತೇನೆ, ಪ್ರಭೂ, ಒಪ್ಪಿಗೆ ಕೊಡು."

ಕಡೆಗೆ ರಾಮ ಒಪ್ಪಿದ.

ಲಕ್ಷ್ಮಣನೂ ಹಠ ಹಿಡಿದ: "ನಾನೂ ನಿನ್ನೊಡನೆ ಬಂದು ನಿನ್ನನ್ನು ನೋಡಿಕೊಳ್ಳು ತ್ತೇನೆ, ನಿನ್ನ ಸೇವೆ ಮಾಡುತ್ತೇನೆ, ಪ್ರಭೂ. ಬೇಡ ಎನ್ನಬೇಡ."

ಅವನು ಮನಸ್ಸು ಬದಲಾಯಿಸುವಂತೆ ರಾಮನು ಎಷ್ಟೋ ಪ್ರಯತ್ನಪಟ್ಟ. ಆದರೆ ಪ್ರಯೋಜನವಾಗಲಿಲ್ಲ. ಕಾಡಿಗೆ ಹೊರಡುವ ಮೊದಲು ರಾಜನನ್ನು ಬೀಳ್ಕೊಳ್ಳಲು ಅವರು ಮೂವರೂ ಹೋದರು.

ದಶರಥ ಅವನ ರಾಣಿಯರು ಮತ್ತು ಮಂತ್ರಿಗಳ ಜೊತೆಯಲ್ಲಿದ್ದ. ನಡೆದ ಸಂಗತಿ ಯಿಂದ ಮಂತ್ರಿಗಳಿಗೆ ದಿಗ್ಭ್ರಮೆಯಾಗಿತ್ತು, ಬಹಳ ಕೋಪ ಬಂದಿತ್ತು. ಅವರು, ಮಹಾರಾಣಿ ನೀವು ಮಾಡುತ್ತಿರುವುದು ತಪ್ಪು. ರಾಮನು ತಪ್ಪೇನನ್ನೂ ಮಾಡಿಲ್ಲ. ರಾಜನು ಅವನನ್ನು ರಾಜ್ಯದಿಂದ ಹೊರಕ್ಕೆ ಕಳುಹಿಸುವುದು ಹೇಗೆ?" ಎಂದು ಕೈಕೆಯಿಯೊಂದಿಗೆ ವಾದಿಸಿದರು. ಆದರೆ ಕೈಕೆಯಿ ಅವರ ಮಾತನ್ನು ಕೇಳಲಿಲ್ಲ. ಅವರು ಮತ್ತೆ ವಾದಿಸಿದರು: "ರಘುವಿನ ಶಾಸನದಂತೆ, ಹಿರಿಯ ಮಗ ಅನರ್ಹನಲ್ಲದೆ ಹೋದರೆ ಅವನೇ ತಂದೆಯ ಸ್ಥಾನಕ್ಕೆ ಬರಬೇಕು".

ಆದರೆ ರಾಣಿ ಕೈಕೆಯಿ ಅವರ ವಾದಗಳಿಗೆಲ್ಲ ಕಿವುಡಳಾಗಿಬಿಟ್ಟಿದ್ದಳು....

ನಿರಾಸೆಯಿಂದ ದಶರಥ ರಾಮನ ಕಡೆಗೆ ತಿರುಗಿದ. "ಮಗೂ, ನನ್ನ ವಚನ ನನ್ನನ್ನು ಕಟ್ಟಿಹಾಕಿದೆ; ನಿನಗೆ ಅಂತಹ ಬಂಧನ ಇಲ್ಲ. ನನ್ನನ್ನು ಸೆರೆಗೆ ಹಾಕಿ ಕಿರೀಟವನ್ನು ಕಿತ್ತುಕೊ. ನ್ಯಾಯವಾಗಿ ನಿನಗೇ ಅದರ ಹಕ್ಕು."

ವ್ಯಸನದಿಂದ ರಾಮ ಉತ್ತರ ಹೇಳಿದ, "ಅಪ್ಪಾ, ನನಗೆ ನೀವು ಏನು ಅಪ್ಪಣೆ ಮಾಡು

ತ್ತಿದ್ದೀರಿ ಎಂದು ತಿಳಿಯಲಾರದಷ್ಟು ನಿಮ್ಮ ಮನಸ್ಸು ಕಲಕಿಹೋಗಿದೆ. ನಮ್ಮನ್ನು ಆಶೀರ್ವದಿಸಿ, ನಾವು ಹೊರಡಲು ಅಪ್ಪಣೆ ಕೊಡಿ.

ದಶರಥನು ಮನಸ್ಸು ಕರಗುವಂತೆ ಚೀರಿಕೊಂಡ: "ನನ್ನ ಮುದ್ದು ಮಕ್ಕಳೇ, ಇನ್ನೊಂದು ದಿನ ಇದ್ದುಬಿಡಿ."

"ಬೇಡಿ, ಅಪ್ಪಾ, ಬೀಳ್ಕೊಡುವ ನೋವನ್ನು ಹೆಚ್ಚು ಮಾಡಿಕೊಳ್ಳುವುದು ಬೇಡ. ಕೂಡಲೇ ನಾವು ಹೊರಡಲು ಅಪ್ಪಣೆ ಕೊಡಿ."

ಕೈಕೆಯಿಯೂ ಋಷಿಗಳು ಉಡುವಂತಹ ನಾರುಬಟ್ಟೆಗಳನ್ನು ಕೂಡಲೆ ತರಿಸಿ ಅವನ್ನು ರಾಮ ಲಕ್ಷ್ಮಣ ಮತ್ತು ಸೀತೆಯರಿಗೆ ಕೊಟ್ಟಳು.

ಆದರೆ ವಸಿಷ್ಠ ಪ್ರತಿಭಟಿಸಿದ. "ಸೀತೆ ಏಕೆ ಋಷಿ ಪತ್ನಿಯರ ಉಡುಪು ಧರಿಸಬೇಕು? ಅವಳೇ ರಾಜಯೋಗ್ಯ ಆಭರಣಗಳನ್ನು ಧರಿಸಿ ರಾಮನ ಸ್ಥಾನದಲ್ಲಿ ಆಳಲಿ" ಎಂದ.

ಅಲ್ಲಿದ್ದವರಿಗೆಲ್ಲ ಕಣ್ಣಿನಲ್ಲಿ ನೀರು ಬಂದಿತು. ವಸಿಷ್ಠ ಹೇಳಿದ, "ಸೀತೆ ಹೊರಟರೆ ಅಯೋಧ್ಯೆಯ ಜನರೆಲ್ಲ ಅವಳ ಹಿಂದೆಯೇ ಹೋಗುವರು. ಭರತನು ಮರುಭೂಮಿಯ ರಾಜನಾಗಿ ಆಳಬೇಕಾಗುತ್ತದೆ. ರಾಮನು ಎಲ್ಲಿದ್ದರೆ ಅಲ್ಲಿ ಅವನ ರಾಜ್ಯ."

ದಶರಥನಿಗೆ ಇನ್ನು ಕೋಪವನ್ನು ತಡೆಯಲು ಸಾಧ್ಯವಾಗಲಿಲ್ಲ. ಅವನು ಕೈಕೆಯಿಯ ಕಡೆಗೆ ತಿರುಗಿ, "ಹೆಣ್ಣೇ, ನಿನ್ನ ಕೆಲಸ ಅತಿಯಾಯಿತು. ನನ್ನ ವಚನದಲ್ಲಿ ಸೀತೆ ಸೇರಿಲ್ಲ. ಅವಳು ಕಾಡಿನಲ್ಲಿರುವ ಹದಿನಾಲ್ಕು ವರ್ಷಗಳಿಗೆ ಬೇಕಾದಷ್ಟು, ರಾಣಿಗೆ ಯೋಗ್ಯವಾದ ಉಡುಪುಗಳನ್ನೂ ಒಡವೆಗಳನ್ನೂ ತನ್ನಿ" ಎಂದನು.

ಅದರಂತೆಯೇ ಮಾಡಿದರು. ಕಟ್ಟಕಡೆಯದಾಗಿ ಬೀಳ್ಕೊಂಡದ್ದಾಯಿತು. ಅವರನ್ನು ಕರೆದುಕೊಂಡು ಹೋಗಲು ರಥ ಕಾಯುತ್ತಿತ್ತು. ಅವರು ಹೊರಟರು. ಮಂತ್ರಿ ಸುಮಂತ್ರನು ಅವರೊಡನೆ ಹೊರಟ.

ಈ ಹೊತ್ತಿಗೆ ಅಯೋಧ್ಯೆಯ ಜನರಲ್ಲಿ ಸುದ್ದಿ ಹಬ್ಬಿತು. ರಾಮ ಮತ್ತು ಸೀತೆಯರನ್ನು ಹೋಗಲು ಬಿಡಲು ಅವರಿಗೆ ಇಷ್ಟವೇ ಇಲ್ಲ. ಅಳುತ್ತಳುತ್ತ ರಥದ ಹಿಂದೆಯೆ ಓಡಿದರು. ಗಂಡಸರು, ಹೆಂಗಸರು, ಮುದುಕರು, ಎಳೆಯರು, ಪಾದಗಳಲ್ಲಿ ರಕ್ತ ಸುರಿಯುತ್ತಿದ್ದರೂ ಲಕ್ಷಿಸದೆ, ಕೆನ್ನೆಗಳ ಮೇಲೆ ಕಣ್ಣೀರು ಉರುಳುತ್ತಿದ್ದಂತೆ ಮೈಲಿಗಟ್ಟಲೆ ರಥದ ಹಿಂದೆ ಹೋದರು.

"ನಿಲ್ಲಿ ನಿಲ್ಲಿ, ಇಲ್ಲವೇ ನಮ್ಮನ್ನೂ ನಿಮ್ಮ ಜೊತೆಗೆ ಕರೆದುಕೊಂಡು ಹೋಗಿ" ಎಂದು ಬೇಡಿಕೊಂಡರು.

ರಾಮನು ಸಾರಥಿಯ ಕಡೆ ತಿರುಗಿದನು. "ಇನ್ನೂ ವೇಗವಾಗಿ ಹೋಗು, ಇನ್ನೂ

ವೇಗವಾಗಿ ಹೋಗು, ನಮ್ಮ ಜೊತೆಗೆ ಬರಲು ಸಾಧ್ಯವಾಗದೆ ಅವರು ಮನೆಗಳಿಗೆ ಹಿಂದಿರುಗಲಿ," ಎಂದನು.

ಕೆಲವರು ಹಿಂದಕ್ಕೆ ಹೋದರು, ಇತರರು ರಾತ್ರಿಯಾಗುವ ವರೆಗೆ ರಥದ ಹಿಂದೆಯೆ ಹೋದರು. ಕೆಲವರು, ಹದಿನಾಲ್ಕು ವರ್ಷಗಳ ನಂತರ ರಾಮನು ಅಯೋಧ್ಯೆಗೆ ಹಿಂದಿರುಗುವ ವರೆಗೆ ನದಿಯ ತೀರದಲ್ಲಿಯೆ ಕಾದಿದ್ದರಂತೆ.

ಸಂಜೆ ದೇಶತ್ಯಾಗ ಮಾಡಿದ ಪ್ರಯಾಣಿಕರು ಗಂಗಾ ನದಿಯ ತೀರದಲ್ಲಿದ್ದ ಶೃಂಗವೇರ ಪುರವನ್ನು ತಲುಪಿದರು. ಅಲ್ಲಿನ ಒಂದು ಜನಾಂಗದ ನಾಯಕ ಗುಹನಿಗೆ ರಾಮನಲ್ಲಿ ಪ್ರೀತಿ. ಅವರನ್ನು ಸ್ವಾಗತಿಸಿ ರಾತ್ರಿಯನ್ನು ಅಲ್ಲಿಯೇ ಕಳೆಯುವಂತೆ ಕೇಳಿಕೊಂಡ. ಮರುದಿನ ಬೆಳಗಾಗುತ್ತಲೇ ರಾಮನು ಸುಮಂತ್ರನನ್ನು ಹಿಂದಕ್ಕೆ ಕಳುಹಿಸಿದ. ಸುಮಂತ್ರನಿಗೆ ಹೋಗಲು ಇಷ್ಟವೇ ಇಲ್ಲ. ಆದರೆ ರಾಮನು, "ಹಿಂದಕ್ಕೆ ಹೋಗಿ ನಮ್ಮ ತಂದೆಗೆ ಸಮಾಧಾನ ಹೇಳು. ನಾವು ನಿಜವಾಗಿ ಹೊರಟು ಹೋದೆವು ಎಂದು ಜನರಿಗೆ ಹೇಳು, ಇಲ್ಲವಾದರೆ ಅವರು ನಮಗಾಗಿ ಕಾಯುತ್ತಾರೆ" ಎಂದು ಹೇಳಿದ.

ರಾಜಕುಮಾರರೂ ಸೀತೆಯೂ ಗಂಗಾನದಿಯನ್ನು ಗುಹನ ದೋಣಿಯಲ್ಲಿ ದಾಟುವ ವರೆಗೆ ಸುಮಂತ್ರನು ನೋಡುತ್ತಿದ್ದ. ಅನಂತರ ದುಃಖದಿಂದ ಅಯೋಧ್ಯೆಗೆ ಹಿಂದಿರುಗಿದ; ಸಂತೋಷವೆಲ್ಲ ನಗರವನ್ನು ತ್ಯಜಿಸಿ ಹೊರಟುಹೋಗಿತ್ತು.

ಸುಮಂತ್ರನು ನೇರವಾಗಿ ರಾಜನ ಬಳಿಗೆ ಹೋದ. ದಶರಥನು ಕೌಸಲ್ಯೆಯ ಮಂದಿರದಲ್ಲಿ ಸಂಕಟಪಡುತ್ತ ಎದೆಯೊಡೆದು ಬಿದ್ದುಕೊಂಡಿದ್ದ. ಸುಮಂತ್ರನನ್ನು ನೋಡುತ್ತಲೇ ಕಾತರದಿಂದ ತಲೆ ಎತ್ತಿ, "ಅವರೆಲ್ಲಿದ್ದಾರೆ ಈಗ? ಅವರು ಎಲ್ಲಿ ಮಲಗಿದರು? ಸುಮಂತ್ರ, ಅವರಿಗೆ ಆಹಾರ ಏನು?" ಎಂದು ಪ್ರಶ್ನಿಸಿದ.

ಸುಮಂತ್ರನು ಅವನಿಗೆ ಎಲ್ಲವನ್ನೂ ಹೇಳಿ ತನ್ನಿಂದಾದಷ್ಟು ಅವನನ್ನು ಸಮಾಧಾನ ಮಾಡಿದ. ಆದರೆ ಏನಾದರೂ ದಶರಥನ ಮನಸ್ಸಿನ ನೋವು ಕಡಿಮೆಯಾಗುವಂತಿರಲಿಲ್ಲ. ಇನ್ನು ಬದುಕಿರಬೇಕು ಎಂಬ ಆಸೆಯೇ ಅವನಿಗಿರಲಿಲ್ಲ. ಅಷ್ಟೊಂದು ದುಃಖ ಅವನಿಗೆ. ರಾಮನು ಹೊರಟ ಆರು ದಿನಗಳ ನಂತರ ದಶರಥನು ಮರಣ ಹೊಂದಿದ.

ಮರುದಿನ ಬೆಳಗ್ಗೆ ರಾಜಗುರು ವಸಿಷ್ಠನು ಮಂತ್ರಿಗಳನ್ನು ಕರೆಸಿ ಕೂಡಲೇ ಭರತನಿಗೆ ಹೇಳಿಕಳುಹಿಸುವಂತೆ ಸೂಚಿಸಿದ. ಸಿಂಹಾಸನ ಬರಿದಾಗಿದ್ದರೆ ತೊಂದರೆ ಆಗಬಹುದು ಎಂದು ಎಚ್ಚರಿಸಿದ. ಭರತನನ್ನು ಹಿಂದಕ್ಕೆ ಕರೆತರಲು ದೂತನೊಬ್ಬನನ್ನು ಕಳುಹಿಸಿದರು. ರಾಮನು ದೇಶತ್ಯಾಗ ಮಾಡಿದುದು ಅಥವಾ ದಶರಥನ ಸಾವು ಇವನ್ನು ಕುರಿತು ಭರತನಿಗೆ ಏನನ್ನೂ ಹೇಳಕೂಡದು ಎಂದು ಅವನಿಗೆ ಅಪ್ಪಣೆ ಮಾಡಿದರು.

# ಅಯೋಧ್ಯೆಗೆ ಭರತನ ಆಗಮನ

ಭರತನ ರಥ ಅಯೋಧ್ಯೆಗೆ ಹತ್ತಿರವಾದಂತೆ ಅವನಿಗೆ ಏನೋ ತಪ್ಪು ನಡೆದಿದೆ ಎನ್ನಿಸಿತು. ಅವನೆಂದ, "ಅಯೋಧ್ಯೆ ಬೇರೆ ರೀತಿಯಾಗಿಯೆ ಕಾಣುತ್ತಿದೆ. ಆ ಸಂಭ್ರಮ, ನಗು ಎಲ್ಲಿ? ಎಲ್ಲಿ ಹೋದವು? ಸಂತೋಷವಾಗಿದ್ದ ಜನರೆಲ್ಲ ಎಲ್ಲಿ ಹೋದರು? ದೂರದಿಂದಲೇ ಕೇಳಿಸುತ್ತಿದ್ದ ಸಂಗೀತವೆಲ್ಲಿ? ಮರಗಳಿಗೂ ಮಂಕುಬಡಿದಂತೆ ಕಾಣುತ್ತದೆ."

ಅರಮನೆಯನ್ನು ತಲುಪಿದವನೇ ಭರತನು ತಂದೆಯ ಮಂದಿರಕ್ಕೆ ಹೋದ. ಅಲ್ಲಿ ದಶರಥನ ಸುಳಿವನ್ನೆ ಕಾಣದೆ ರಾಣಿ ಕೈಕೆಯಿಯ ಅರಮನೆಗೆ ಹೋದ. ಅವನ ತಾಯಿ ತಟ್ಟನೆ ಮೇಲಕ್ಕೆದ್ದು ಅವನನ್ನು ಆಲಿಂಗಿಸಿದಳು.

ಭರತನು ತಾಳ್ಮೆ ಇಲ್ಲದೆ, "ನನ್ನ ತಂದೆ ಎಲ್ಲಿ? ಅವನಿಗೆ ನಾನು ನಮಸ್ಕರಿಸಬೇಕು" ಎಂದ.

"ಜೀವಂತ ಪ್ರಾಣಿಗಳೆಲ್ಲ ಒಂದಲ್ಲ ಒಂದು ದಿನ ಎಲ್ಲಿಗೆ ಹೋಗಬೇಕೊ ಅಲ್ಲಿಗೆ ನಿನ್ನ ತಂದೆ ಹೋದ," ಕೈಕೆಯಿ ಉತ್ತರಿಸಿದಳು.

ಭರತನು ದಿಗ್ಭ್ರಮೆಯಿಂದ, ದುಃಖದಿಂದ ಕೂಗಿಕೊಂಡನು. ಕೈಕೆಯಿ ಸಿಟ್ಟಿನಿಂದ ಎಂದಳು, "ಮಗೂ, ರಾಜಕುಮಾರನಾದವನು ಹೀಗೆ ದುಃಖಪಡುವುದು ಯೋಗ್ಯವಲ್ಲ."

ಆದರೆ ಭರತನನ್ನು ಸಮಾಧಾನಮಾಡುವುದು ಅಸಾಧ್ಯವಾಯಿತು. "ರಾಮನ ಪಟ್ಟಾಭಿಷೇಕಕ್ಕೆ ರಾಜನು ಸಿದ್ಧತೆ ಮಾಡಿಕೊಳ್ಳುತ್ತಿದ್ದಾನೆ ಎಂದುಕೊಂಡು ಸಂತೋಷದಿಂದ ನಾನು ಬಂದೆ. ಕಂಡದ್ದು ಇದನ್ನು! ಏನಾಯಿತು? ಅವನು ತೀರಿಕೊಂಡದ್ದು ಹೇಗೆ? ನನಗೆ ಸಂದೇಶ ಏನನ್ನೂ ಹೇಳಲಿಲ್ಲವೆ?"

"ಇಲ್ಲ," ಕಠಿಣವಾಗಿ ಕೈಕೆಯಿ ಉತ್ತರ ಹೇಳಿದಳು. 'ಓ ರಾಮಾ, ಓ ಲಕ್ಷ್ಮಣಾ, ಓ ಸೀತಾ!' ಎಂದೇ ಕಡೆಯಲ್ಲಿ ಅವನು ಹೇಳಿದ ಮಾತುಗಳು. ಅವರನ್ನು ರಾಜ್ಯದಿಂದ ಹೊರಕ್ಕೆ ಕಳುಹಿಸಿದ್ದ, ನೋಡು." ಹೀಗೆಂದು ಅವಳು ತಾನು ಎರಡು ವರಗಳನ್ನು ಕೇಳಿದುದು, ರಾಮನನ್ನು ರಾಜ್ಯದಿಂದ ಹೊರಕ್ಕೆ ಕಳುಹಿಸಿದುದು, ಸೀತೆ ಮತ್ತು ಲಕ್ಷ್ಮಣ ಅವನ ಜೊತೆಗೆ ಹೋದದ್ದು, ದುಃಖದಿಂದ ರಾಜ ಸತ್ತುಹೋದದ್ದು ಎಲ್ಲವನ್ನೂ ಭರತನಿಗೆ

ಹೇಳಿದಳು. ಕಡೆಯಲ್ಲಿ ಅವಳು, "ಕಂದಾ, ಇದೆಲ್ಲವನ್ನೂ ನಾನು ಮಾಡಿದ್ದು ನಿನಗಾಗಿ ಈಗ ರಾಜ್ಯ ನಿನ್ನದು. ನೀನು ಕಿರೀಟವನ್ನು ಧರಿಸುವೆ" ಎಂದಳು.

ಭರತನು ಸಂಕಟದಿಂದ, "ಅಯ್ಯೋ ದುಷ್ಟ ಹೆಂಗಸೇ. ನೀನು ಏನು ಮಾಡಿಬಿಟ್ಟೆ ನಿನಗೆ ಅರ್ಥವಾಯಿತೆ? ತಂದೆಯೂ ಇಲ್ಲದೆ, ತಂದೆಯಂತಿದ್ದ ಅಣ್ಣನೂ ಇಲ್ಲದೆ ಕಿರೀಟದಿಂದ ನನಗೇನು ಪ್ರಯೋಜನ? ತಂದೆಯ ನಂತರ ಹಿರಿಯ ಮಗನೇ ರಾಜನಾಗಬೇಕು ಎಂಬ ಇಕ್ಷ್ವಾಕು ವಂಶದ ಸಂಪ್ರದಾಯ ನಿನಗೆ ತಿಳಿಯದೆ?" ಎಂದನು. ದುಃಖದಲ್ಲಿ ಅವನು ಅವಳು ತನ್ನ ತಾಯಿ ಎಂಬುದನ್ನೇ ಮರೆತು ಅವಳನ್ನು ದೂಷಿಸಿದ. "ನಾನು ಧರ್ಮನಿಷ್ಠ ಎಂದು ಯಾವಾಗಲೂ ಹೆಮ್ಮೆಪಡುತ್ತಿದ್ದೆ. ನನ್ನ ಹೆಮ್ಮೆಯನ್ನೆಲ್ಲ ನೀನು ನಾಶ ಮಾಡಿದೆ. ನನಗೆ ಇಂತಹ ಕೆಡುಕನ್ನು ಮಾಡಲು ನಿನಗೆ ಹೇಗೆ ಮನಸ್ಸು ಬಂದಿತು? ನಾನಂತೂ ನಿನ್ನ ಇಷ್ಟದಂತೆ ಎಂದೂ ನಡೆಯಲಾರೆ. ರಾಮನನ್ನು ಹಿಂದಕ್ಕೆ ಕರೆದುಕೊಂಡು ಬಂದು ಅವನನ್ನು ಸೇವಿಸುತ್ತೇನೆ." ಎಂದನು.

ತಾಯಿಯನ್ನು ಬಿಟ್ಟು ಭರತನು ಕೌಸಲ್ಯೆಯನ್ನು ನೋಡಲು ಹೊರಟನು. ಅವನು ಹಿಂದಕ್ಕೆ ಬಂದ ಎಂಬ ಸಂಗತಿ ಅವಳಿಗೂ ತಿಳಿದಿತ್ತು. ಸುಮಿತ್ರೆಯನ್ನು ಕರೆದುಕೊಂಡು ಅವಳೂ ಅವನನ್ನು ಕಾಣಲು ಬರುತ್ತಿದ್ದಳು. ಅವಳನ್ನು ನೋಡುತ್ತಲೇ ಭರತನು ಅವಳ ಪಾದಗಳಿಗೆ ನಮಸ್ಕರಿಸಿದನು. ಅವಳು ಅವನನ್ನು ಮೇಲೆತ್ತಿ ತಬ್ಬಿಕೊಂಡಳು. ಅನಂತರ, "ಮಗೂ, ರಾಜ್ಯ ಈಗ ನಿನ್ನದಾಗಿದೆ. ನಿನಗೆ ಅದನ್ನು ಕೈಕೆಯಿ ಕ್ರೂರವಾದ ರೀತಿಯಲ್ಲಿ ದೊರಕಿಸಿಕೊಟ್ಟಿದ್ದಾಳೆ. ಅದರಿಂದ ಸುಖಪಡು. ಆದರೆ ನನ್ನನ್ನು ನನ್ನ ಮಗ ರಾಮನ ಬಳಿಗೆ ಕಳುಹಿಸಿಬಿಡು." ಎಂದಳು.

ಈ ಮಾತುಗಳಿಂದ ಕರುಳಿಗೆ ಮುಳ್ಳು ಚುಚ್ಚಿದಂತಾಗಿ ಭರತನು ಅಳುತ್ತ ಎಂದನು, "ಅಮ್ಮಾ, ನನ್ನ ಮಾತನ್ನು ನಂಬಿ. ಈ ದುಷ್ಟ ಯೋಜನೆಯ ವಿಷಯ ನನಗೆ ಏನೇನೂ ತಿಳಿದಿರಲಿಲ್ಲ. ರಾಮನಲ್ಲಿ ನನಗೆ ಎಷ್ಟು ಪ್ರೀತಿ ಎಂದು ನಿಮಗೇ ಗೊತ್ತು. ಅವನಿಗೆ ಕೆಡಕಾಗು ವಂತೆ ಏನನ್ನೇ ಆಗಲಿ ನಾನು ಮಾಡುವುದು ಸಾಧ್ಯವೆ?"

ಕೌಸಲ್ಯೆಗೆ ಅವನ ಮಾತಿನಲ್ಲಿ ನಂಬಿಕೆ ಬಂದಿತು. ತನ್ನನ್ನು ರಾಮನ ಬಳಿಗೆ ಕಳುಹಿಸು ವಂತೆ ಮತ್ತೆ ಬೇಡಿಕೊಂಡಳು.

ಭರತನು ಹೇಳಿದ: "ಧೈರ್ಯವಾಗಿರಿ, ನಾನೇ ರಾಮನನ್ನು ಹಿಂದಕ್ಕೆ ಕರೆದುಕೊಂಡು ಬರುತ್ತೇನೆ."

ರಾಮನನ್ನು ಹುಡುಕುವ ರೀತಿಯನ್ನು ಭರತ ಮತ್ತು ಶತ್ರುಘ್ನರು ಚರ್ಚಿಸುತ್ತಿದ್ದರು; ಆ ಹೊತ್ತಿಗೆ ಕೈಕೆಯಿಯು ಬಹುಮಾನ ಕೊಟ್ಟಿದ್ದ ಸೊಗಸಾದ ರೇಶ್ಮೆ ವಸ್ತ್ರವನ್ನುಟ್ಟು ಒಡವೆಗಳಿಂದ ಥಳಥಳಿಸುತ್ತ ಮಂಥರೆ ಬಾಗಿಲಿನಲ್ಲಿ ಕಾಣಿಸಿಕೊಂಡಳು. ಅಯೋಧ್ಯೆಗೆ

ಬಡಿದ ಕಷ್ಟಕ್ಕೆಲ್ಲ ಮಂಥರೆಯೇ ಮೂಲ ಎಂದು ದ್ವಾರಪಾಲಕನು ಶತ್ರುಘ್ನನಿಗೆ ಹೇಳಿದ್ದ. ಶತ್ರುಘ್ನನು ತಿರುಗಿದ, ಕೈಕೆಯಿಯು ಬೇಡ ಬೇಡ ಎನ್ನುತ್ತಿದ್ದರೂ ಮಂಥರೆಯ ಕೂದಲನ್ನು ಹಿಡಿದುಕೊಂಡು ಅವಳನ್ನು ಕೊಠಡಿಯಲ್ಲೆಲ್ಲ ಎಳೆದಾಡಿದ. ಭರತನು ಅಡ್ಡ ಬಾರದಿದ್ದರೆ ಅವಳನ್ನು ಕೊಂದೇಬಿಡುತ್ತಿದ್ದ.

ಮರುದಿನ ವಸಿಷ್ಠರು ಕರೆಕಳುಹಿಸಲು ಭರತನು ಆಸ್ಥಾನಕ್ಕೆ ಬಂದ. ಗುರು ಹೇಳಿದ: "ನಿಮ್ಮ ತಂದೆ ಸ್ವರ್ಗಕ್ಕೆ ಹೋದ, ನಿನ್ನ ಅಣ್ಣ ರಾಜ್ಯದಿಂದಾಚೆ ಇದ್ದಾನೆ, ನೀನು ಕಿರೀಟವನ್ನು ಧರಿಸುವುದು ನ್ಯಾಯವೇ. ನಿನ್ನ ಪಟ್ಟಾಭಿಷೇಕಕ್ಕೆ ದಿನವನ್ನು ನಿರ್ಧರಿಸೋಣ".



ಭರತನು ಎದ್ದು ನಿಂತ. ಗಂಭೀರವಾಗಿ, ಆದರೆ ಭಾವಪೂರ್ಣವಾದ ಧ್ವನಿಯಲ್ಲಿ ಹೇಳಿದ: "ಇಂತಹ ಪಾಪ ಕೆಲಸವನ್ನು ಮಾಡು ಎಂದು ನೀವು ನನಗೆ ಹೇಗೆ ಹೇಳುತ್ತೀರಿ? ಈ ರಾಜ್ಯವು ರಾಮನಿಗೆ ಸೇರಿದ್ದು." ಎಲ್ಲರೂ ಸಂತೋಷದಿಂದ ಚಪ್ಪಾಳೆ ತಟ್ಟಿದರು. "ನಾನು ನಮ್ಮ ಅಣ್ಣನನ್ನು ಕರೆದುಕೊಂಡು ಬರಲು ಹೋಗುತ್ತೇನೆ. ಆಗದೆ ಹೋದರೆ, ನಾನು ಅವರ ಜೊತೆಗೆ ಕಾಡಿನಲ್ಲಿ ಇದ್ದು ಬಿಡುತ್ತೇನೆ," ಭರತ ಮಾತು ಕೊಟ್ಟ.

ಸೈನ್ಯವನ್ನು ಸಿದ್ಧಗೊಳಿಸುವಂತೆ ಭರತ ಶತ್ರುಘ್ನನಿಗೆ ಹೇಳಿದ; ರಾಮನನ್ನು ಹುಡುಕಲು ಹೊರಡಲು ಸಿದ್ಧವಾಗಿರುವಂತೆ ಆಸ್ಥಾನದವರಿಗೆ ಅಪ್ಪಣೆ ಮಾಡಿದ.



# ಚಿತ್ರಕೂಟದಲ್ಲಿ

ಗಂಗಾನದಿಯನ್ನು ದಾಟಿ. ರಾಮ ಸೀತೆ ಮತ್ತು ಲಕ್ಷ್ಮಣರು, ಯಮುನಾ ಮತ್ತು ಗಂಗಾ ನದಿಗಳ ಸಂಗಮ ಸ್ಥಳದಲ್ಲಿದ್ದ ಭಾರದ್ವಾಜಾಶ್ರಮವನ್ನು ಸೇರುವ ವರೆಗೆ ನದಿಯ ತೀರದಲ್ಲಿಯೆ ನಡೆದುಕೊಂಡು ಹೋದರು. ಭಾರದ್ವಾಜನು ಅವರನ್ನು ಆದರದಿಂದ ಬರ ಮಾಡಿಕೊಂಡು, ಅವರ ದೇಶ ತ್ಯಾಗದ ಕಾಲವನ್ನು ತನ್ನ ಆಶ್ರಮದಲ್ಲೇ ಕಳೆಯುವಂತೆ ಸೂಚಿಸಿದ. ರಾಮನು. "ನಿಮ್ಮ ಸೌಜನ್ಯ ದೊಡ್ಡದು. ಆದರೆ ನಾನು ಹತ್ತಿರದಲ್ಲಿಯೆ ಇದ್ದೇನೆ ಎಂದು ಜನರಿಗೆ ತಿಳಿದರೆ ನನ್ನ ಹಿಂದೆಯೆ ಬರುತ್ತಾರೆ. ಸೀತೆ ಸುಖವಾಗಿರಬಹುದಾದ ಪ್ರಶಾಂತವಾದ ಸ್ಥಳ ಯಾವುದಾದರೂ ತಮಗೆ ತಿಳಿದಿದೆಯೆ?" ಎಂದ.





ಚಿತ್ರಕೂಟ ಪರ್ವತಪ್ರದೇಶ. ಬಹಳ ಸುಂದರವಾಗಿದೆ; ಸಮೃದ್ಧಿಯಾಗಿ ಹೂವುಗಳಿವೆ, ಮರಗಳು ಹಣ್ಣುಗಳಿಂದ ತುಂಬಿವೆ; ಹೊಳೆಗಳಲ್ಲಿ ನೀರು ಮಂಜುಳ ನಿನಾದದಿಂದ ಹರಿಯುತ್ತದೆ ಎಂದು ಭಾರದ್ವಾಜ ವರ್ಣಿಸಿದ. ರಾಮ, ಲಕ್ಷ್ಮಣ, ಸೀತೆಯರು ಚಿತ್ರಕೂಟಕ್ಕೆ ಹೋದರು. ಆ ಚೆಲುವಾದ ಪ್ರದೇಶ ಅವರಿಗೆ ಪ್ರಿಯವಾಯಿತು; ಲಕ್ಷ್ಮಣನು ರಾಮ ಸೀತೆಯರಿಗಾಗಿ ಒಂದು ಗುಡಿಸಲನ್ನು ಕಟ್ಟಿದ. ಸಂತೋಷವಾಗಿ ಅವರು ಅಲ್ಲಿ ನೆಲೆಸಿದರು.

ಒಂದು ದಿನ ಅವರು ಮಾತನಾಡುತ್ತ ಕುಳಿತಿರುವಾಗ ಕಾಡಿನ ಪ್ರಾಣಿಗಳು ದಿಕ್ಕೆಟ್ಟು ಓಡುತ್ತಿರುವುದನ್ನು ಕಂಡರು. ಲಕ್ಷ್ಮಣನು ಎತ್ತರವಾದ ಮರವೊಂದನ್ನು ಏರಿ ಸುತ್ತ ನೋಡಿದ. ಉತ್ತರ ದಿಕ್ಕಿನಲ್ಲಿ ಬೆಟ್ಟದ ಬುಡದಲ್ಲಿ ರಥ, ಆನೆ, ಕುದುರೆಗಳಿಂದ ಕೂಡಿದ ಸೈನ್ಯವೊಂದನ್ನು ಕಂಡ.

"ಸೈನ್ಯವೊಂದು ಬರುತ್ತಿದೆ," ಲಕ್ಷ್ಮಣ ಕೂಗಿ ಹೇಳಿದ. "ಬೆಂಕಿಯನ್ನು ಆರಿಸು, ಸೀತೆಯನ್ನು ಸುರಕ್ಷಿತವಾದ ಸ್ಥಳಕ್ಕೆ ಕರೆದುಕೊಂಡು ಹೋಗಿಬಿಡು, ಬಿಲ್ಲು-ಬಾಣಗಳನ್ನು ಸಿದ್ಧ ಮಾಡಿಕೊಂಡು ಯುದ್ಧಕ್ಕೆ ಸಿದ್ಧನಾಗು."

ಆತಂಕದಿಂದ ರಾಮ ಕೇಳಿದ, "ಯಾರ ಸೈನ್ಯ ಅದು, ಕಾಣುತ್ತದೇನು?"

ಲಕ್ಷ್ಮಣನು ಗಮನವಿಟ್ಟು ನೋಡಿ ಕೂಗಿ ಹೇಳಿದ, "ಭರತನೇ ಬರುತ್ತಿರುವುದು. ಈಗ ರಾಜ್ಯವಂತೂ ಕೈಸೇರಿದೆಯಲ್ಲ, ಇನ್ನು ತಾನು ತೊಂದರೆಯಿಲ್ಲದೆ ಆಳಬೇಕೆಂದು ನಮ್ಮನ್ನು ಕೊಲ್ಲಲು

ಬರುತ್ತಿದ್ದಾನೆ!" ಕೋಪವೇರುತ್ತಿದ್ದ ಧ್ವನಿಯಲ್ಲಿ ಲಕ್ಷ್ಮಣ ಮುಂದುವರಿಸಿದ, "ಅವನನ್ನು ಕೊಂದುಬಿಡುತ್ತೇನೆ. ನಿನ್ನ ರಾಜ್ಯ ಮತ್ತೆ ನಿನ್ನ ಕೈಸೇರುವುದು."

ರಾಮನು ಶಾಂತಿಯಿಂದ ಹೇಳಿದ: "ಬರುತ್ತಿರುವುದು ಭರತನೇ ಆದರೆ ನನ್ನ ಬಿಲ್ಲು ಬಾಣಗಳು ಬೇಕಿಲ್ಲ. ನಮ್ಮನ್ನು ಹಿಂದಕ್ಕೆ ಕರೆದುಕೊಂಡು ಹೋಗಲು ಬರುತ್ತಿದ್ದಾನೆ ಎಂದು ನನಗೆ ಖಂಡಿತವಾಗಿದೆ. ಅಲ್ಲದೆ, ನನ್ನ ತಮ್ಮನ ಜೊತೆಗೆ ನಾನು ಯುದ್ಧ ಮಾಡಲಾರೆ. ನನ್ನ ತಮ್ಮನ ರಕ್ತದ ಬೆಲೆ ಯಾವ ರಾಜ್ಯಕ್ಕೂ ಇಲ್ಲ."

ಹೀಗೆ ಅವರು ಭರತನಿಗಾಗಿ ಕಾದರು.

ರಾಮನನ್ನು ಎಲ್ಲಿ ಕಾಣಬಹುದು ಎಂದು ಭಾರದ್ವಾಜರು ಭರತನಿಗೆ ಹೇಳಿದ್ದರು. ಚಿತ್ರಕೂಟವನ್ನು ಸೇರುತ್ತಲೆ ಅವನು ತನ್ನ ಸೈನಿಕರಿಗೆ ಬೆಟ್ಟದ ತಡಿಯಲ್ಲಿ ನಿಲ್ಲುವಂತೆ ಹೇಳಿದ. ರಾಮನನ್ನು ಹುಡುಕಲು ತಾನು ಬೆಟ್ಟವನ್ನು ಹತ್ತಲು



ಪ್ರಾರಂಭಿಸಿದ. ಚಿತ್ರಕೂಟ ಅರಣ್ಯದ ಚೆಲುವು ಅವನ ಮನಸ್ಸನ್ನು ಸೆರೆಹಿಡಿಯಿತು. ಆಗಲೇ ಅವನು ರಾಮ, ಸೀತೆ ಮತ್ತು ಲಕ್ಷ್ಮಣರನ್ನು ಕಂಡನು. ಮುಂದಕ್ಕೆ ಓಡಿ ಹೋಗಿ ರಾಮನ ಪಾದಗಳ ಮೇಲೆ ಬಿದ್ದನು. "ಪ್ರಭೂ" ಎಂದ, ಮುಂದೆ ಮಾತೇ ಹೊರಡಲಿಲ್ಲ. ಆ ಹೊತ್ತಿಗೆ ಶತ್ರುಘ್ನನೂ ಬಂದು ರಾಮನ ಪಾದಗಳಿಗೆ ನಮಸ್ಕರಿಸಿದ. ರಾಮನ ಕಣ್ಣುಗಳಲ್ಲಿ ನೀರು ಉಕ್ಕಿತು. ಅವನು ಅವರಿಬ್ಬರನ್ನೂ ಮೇಲೆತ್ತಿ ತಬ್ಬಿಕೊಂಡ.

ತಡೆಹಿಡಿಯುತ್ತಿದ್ದ ಧ್ವನಿಯಲ್ಲಿ ಭರತ ಹೇಳಿದ: "ಪ್ರಭೂ. ನಾನು ದುಃಖದ ಸುದ್ದಿ ತಂದಿದ್ದೇನೆ. ನೀನು ಹೊರಟ ಆರು ದಿನಗಳಿಗೆ ನಮ್ಮ ತಂದೆ ದುಃಖದಿಂದ ತೀರಿಕೊಂಡ." ಇದನ್ನು ಕೇಳಿ ರಾಮನು ದುಃಖದಿಂದ ಕುಸಿದುಹೋದ. ಭರತ ಇಡೀ ದಿನವನ್ನು ಸಹೋದರರೊಡನೆ ಕಳೆದ. ಅವರು ಒಬ್ಬರನ್ನೊಬ್ಬರು ಸಮಾಧಾನ ಮಾಡಿದರು.

ಮರುದಿನ ಭರತನು ಎಲ್ಲ ಮಂತ್ರಿಗಳ ಎದುರಿನಲ್ಲಿ ರಾಮನಿಗೆ ಹೇಳಿದ, "ಅಯೋಧ್ಯೆಗೆ. ಪರಿತಪಿಸುತ್ತಿರುವ ನಿನ್ನ ಪ್ರಜೆಗಳ ಬಳಿಗೆ ಹಿಂದಿರುಗು, ಅಣ್ಣಾ. ನ್ಯಾಯವಾಗಿ ನಿನ್ನದೇ ಆದ ಕಿರೀಟವನ್ನು ಧರಿಸು."



ರಾಮ ಉತ್ತರ ಹೇಳಿದ, "ಇಲ್ಲ, ಭರತ. ತಂದೆ ಸಾಯುವ ಮೊದಲು ನನ್ನನ್ನು ಹದಿನಾಲ್ಕು ವರ್ಷಗಳ ಕಾಲ ರಾಜ್ಯದಿಂದ ಕಳುಹಿಸಿದ, ಕಿರೀಟವನ್ನು ನಿನಗೆ ಕೊಟ್ಟ. ಹೋಗು, ಶಾಂತಿ ಸಮಾಧಾನಗಳಿಂದ ರಾಜ್ಯವನ್ನು ಆಳು. ನಮ್ಮ ತಂದೆಯ ಇಚ್ಛೆಯನ್ನು ನಾವು ನಡೆಸಬೇಕು."

ಭರತನು ದುಃಖದಿಂದ ನುಡಿದ: "ಇದೆಲ್ಲ ನನ್ನ ತಾಯಿಯಿಂದ ಆದದ್ದು. ಇಂತಹ ಅನ್ಯಾಯ ಮುಂದುವರಿಯಬಾರದು. ನಮ್ಮ ಜೊತೆಗೆ ಹಿಂದಕ್ಕೆ ಬಾ."

ಆದರೆ ರಾಮ ಮನಸ್ಸನ್ನು ಬದಲಾಯಿಸಲಿಲ್ಲ. "ಚಂದ್ರ ತನ್ನ ಸೌಂದರ್ಯವನ್ನು ಕಳೆದುಕೊಳ್ಳಬಹುದು, ಹಿಮಾಲಯ ತನ್ನ ಹಿಮವನ್ನು ಕಳೆದುಕೊಳ್ಳಬಹುದು, ಸಮುದ್ರ ತನ್ನ ಮೇರೆಗಳನ್ನು ಮೀರಬಹುದು; ಆದರೆ ಅರಸನಿಗೆ ಕೊಟ್ಟ ಮಾತನ್ನು ನಾನು ಮುರಿಯ ಲಾರೆ. ಭರತ, ಹಿಂದಕ್ಕೆ ಹೋಗು, ಶತ್ರುಘ್ನನ ಸಹಾಯದಿಂದ ರಾಜ್ಯವನ್ನು ನೋಡಿಕೊ."

ಭರತನಿಗೆ ದುಃಖವಾಯಿತು. "ಹಾಗಾದರೆ, ನನ್ನಿಂದ ಸಾಧ್ಯವಾದಷ್ಟು ಚೆನ್ನಾಗಿ ನಿನ್ನ ಹೆಸರಿನಲ್ಲಿ ಆಳುವಂತೆ ನನಗೊಂದು ಸಂಕೇತವನ್ನು ಕೊಡು." ರಾಮನಿಗೆ ಸಂತೋಷ ವಾಯಿತು. ತನ್ನ ಮರದ ಪಾದುಕೆಗಳನ್ನು ಭರತನಿಗೆ ಕೊಟ್ಟನು. ಭರತನು ಭಕ್ತಿಯಿಂದ ಅವನ್ನು ತಲೆಯ ಮೇಲೆ ಇಟ್ಟುಕೊಂಡು, "ಇವನ್ನು ನಿನ್ನ ಸಿಂಹಾಸನದ ಮೇಲಿಟ್ಟು ನಿನ್ನ ಹೆಸರಿನಲ್ಲಿ ನಾನು ರಾಜ್ಯವನ್ನು ಆಳುತ್ತೇನೆ. ಆದರೆ ನೀನು ಹದಿನಾಲ್ಕು ವರ್ಷಗಳು ಕಳೆಯು ತ್ತಲೇ ಹಿಂದಕ್ಕೆ ಬಾರದೆ ಹೋದರೆ ಅಗ್ನಿಪ್ರವೇಶ ಮಾಡಿ ಪ್ರಾಣ ಬಿಡುತ್ತೇನೆ" ಎಂದ.

ಹೀಗೆ ಹೇಳಿ ಅವನು ದುಃಖದಿಂದ ಹೊರಟು ಹೋದ. ಅಯೋಧ್ಯೆಗೆ ಹಿಂದಿರುಗಿ, ರಾಮನ ಪಾದುಕೆಗಳನ್ನು ಸಿಂಹಾಸನದ ಮೇಲಿರಿಸಿ ಹದಿನಾಲ್ಕು ವರ್ಷಗಳ ಕಾಲ ವಿವೇಕದಿಂದ ರಾಜ್ಯವನ್ನು ಆಳಿದನು. ಈ ಕಾಲದಲ್ಲಿ ಅವನು ಅಯೋಧ್ಯೆಯಲ್ಲಿ ವಾಸಿಸಲಿಲ್ಲ, ನಂದಿಗ್ರಾಮ ಎಂಬ ಸ್ಥಳದಲ್ಲಿ ವಾಸಿಸಿದ. ರಾಮಲಕ್ಷ್ಮಣರಂತೆ ತಾನೂ ಸನ್ಯಾಸಿಯ ಜೀವನವನ್ನು ನಡೆಸಿದ.



# ಪಂಚವಟಿಯಲ್ಲಿ ರಾಮ

ಭರತನು ಹೋದ ಮೇಲೆ ರಾಮನಿಗೆ ಚಿತ್ರಕೂಟದಲ್ಲಿ ಇನ್ನು ವಾಸಿಸಲು ಮನಸ್ಸು ಬರಲಿಲ್ಲ. ಆದುದರಿಂದ ಸೀತೆ ಮತ್ತು ಲಕ್ಷ್ಮಣರ ಜೊತೆಯಲ್ಲಿ ದಂಡಕಾರಣ್ಯಕ್ಕೆ ಹೋದನು. ಕಾಡಿನಲ್ಲಿ ರಾಕ್ಷಸರು ತುಂಬಿಹೋಗಿದ್ದರು; ಅಲ್ಲಿ ವಾಸಿಸುತ್ತಿದ್ದ ಋಷಿಗಳನ್ನು ಗೋಳಾಡಿಸುತ್ತಿದ್ದರು.

ರಾಮನನ್ನು ಕಂಡು ಋಷಿಗಳಿಗೆ ಬಹಳ ಸಂತೋಷವಾಯಿತು "ವೀರ ಪ್ರಭೂ, ನಮ್ಮ ದನಕರುಗಳನ್ನು ಕೊಂದು ನಮ್ಮ ಪವಿತ್ರ ಸ್ಥಳಗಳನ್ನು ಹೊಲಸು ಮಾಡುವ ರಾಕ್ಷಸರ ಪೀಡೆಯಿಂದ ನಮ್ಮನ್ನು ರಕ್ಷಿಸಲು ದೇವರೇ ನಿನ್ನನ್ನು ಇಲ್ಲಿಗೆ ಕಳುಹಿಸಿದ" ಎಂದು ಅವನನ್ನು ಸ್ವಾಗತಿಸಿದರು.

ಹತ್ತು ವರ್ಷಗಳ ಕಾಲ ಅವರು ಅಲ್ಲಿದ್ದು ಆಶ್ರಮದಿಂದ ಆಶ್ರಮಕ್ಕೆ ಹೋದರು: ದಂಡಕಾರಣ್ಯಕ್ಕೆ ರಾಕ್ಷಸರ ಬಾಧೆ ತಪ್ಪಿತು. ಋಷಿಗಳು ನಿರಾತಂಕವಾಗಿ ತಪಸ್ಸನ್ನು ಮಾಡಲು ಸಾಧ್ಯವಾಯಿತು.

ಕಡೆಗೆ ಅವರು ಅಗಸ್ತ್ಯರ ಆಶ್ರಮವನ್ನು ಸೇರಿದರು. ಆ ಮಹರ್ಷಿ ಅವರನ್ನು ಆಶೀರ್ವದಿಸಿ, ಅವರ ವನವಾಸದ ಉಳಿದ ವರ್ಷಗಳನ್ನು ಸುಂದರ ನದಿ ಗೋದಾವರಿಯ ತೀರದ ಪಂಚವಟಿ ಕಾಡಿನಲ್ಲಿ ಕಳೆಯುವಂತೆ ಸಲಹೆ ಮಾಡಿದ.

ನವಿಲುಗಳು ಕುಣಿಕುಣಿಯುವ, ಪ್ರಾಣಿಗಳು ನಿಶ್ಚಿಂತೆಯಾಗಿ ಅಲೆದಾಡುವ ಸುಂದರ ಪಂಚವಟಿಗೆ ಅವರು ಬಂದರು. ಅಲ್ಲಿ ಹೂಗಿಡಗಳು, ಹಣ್ಣಿನ ಮರಗಳು ಸಮೃದ್ಧಿಯಾಗಿದ್ದವು. ಅವರು ಅಲ್ಲಿ ನೆಲಸಿ ದಿನಗಳನ್ನು ಸಂತೋಷದಿಂದ ಕಳೆಯುತ್ತಿದ್ದರು.

ಲಂಕಾ ದ್ವೀಪದ ರಾಜ ರಾವಣ. ಅವನ ತಂಗಿ ಶೂರ್ಪಣಖಿ. ಒಂದು ದಿನ ಅವಳು ಆ ಕಾಡಿಗೆ ಬಂದವಳು ಸುಂದರರಾದ ಆ ಇಬ್ಬರು ರಾಜಕುಮಾರರನ್ನು ನೋಡಿದಳು. ಅವರು ಯಾರು ಎಂದು ಅವಳಿಗೆ ತಿಳಿಯಲಿಲ್ಲ. ರಾಕ್ಷಸರ ಕಾಡಿಗೆ ಬರುವುದಕ್ಕೆ ಇವರಿಗೆ ಎಷ್ಟು ಧೈರ್ಯ ಎಂದು ಆಶ್ಚರ್ಯಪಟ್ಟಳು. ಅವರಿಬ್ಬರಲ್ಲಿ ಅವಳಿಗೆ ಪ್ರೀತಿಯುಂಟಾಯಿತು. ಮೊದಲು ಅವಳು, ತನ್ನನ್ನು ಮದುವೆಯಾಗುವಂತೆ ರಾಮನನ್ನು ಕೇಳಿದಳು. ಅವನು ಮೃದುವಾದ ಮಾತುಗಳಿಂದಲೇ ನಿರಾಕರಿಸಿದ. ಅನಂತರ ಅವಳು ಲಕ್ಷ್ಮಣನನ್ನು ತನ್ನನ್ನು



ಮದುವೆಯಾಗು ಎಂದು ಕೇಳಿದಳು. ರಾಜಕುಮಾರರು ಅವಳನ್ನು ಚೇಷ್ಟೆ ಮಾಡಿದರು. "ನಾನು ನಿನ್ನನ್ನು ಮದುವೆಯಾಗುವುದು ಹೇಗೆ?" ರಾಮ ಹೇಳಿದ. "ನೋಡು, ನನ್ನ ಹೆಂಡತಿ ಇಲ್ಲಿಯೇ ಇದ್ದಾಳೆ," ಲಕ್ಷ್ಮಣ ಹೇಳಿದ. "ನಾನೇ ರಾಮನ ಸೇವಕ. ನನ್ನ ಹೆಂಡತಿ ಸೇವಕನ ಸೇವಕಿಯಾಗುತ್ತಾಳೆ, ಅಷ್ಟೆ."

ಅವರು ಪರಿಹಾಸ್ಯ ಮಾಡುತ್ತಿದ್ದಾರೆ ಎಂಬುದು ಶೂರ್ಪಣಖಿಗೆ ತಿಳಿಯಲಿಲ್ಲ. "ರಾಮ, ನಾನು ನಿನ್ನ ಹೆಂಡತಿಯನ್ನು ತಿಂದುಬಿಡುತ್ತೇನೆ. ಅನಂತರ ನೀನು ನನ್ನನ್ನು ಮದುವೆಯಾಗಬಹುದು" ಎಂದು ಅಬ್ಬರಿಸುತ್ತ ಸೀತೆಯತ್ತ ನುಗ್ಗಿದಳು.

ರಾಮನು ಅವಳನ್ನು ತಡೆದು ನಿಲ್ಲಿಸಿದ. "ಇಂತಹ ಅಪಾಯದ ವ್ಯಕ್ತಿಯ ಜೊತೆಗೆ ನಾವು ಹಾಸ್ಯ ಮಾಡಬಾರದು" ಎಂದ. ಆದರೆ ಲಕ್ಷ್ಮಣನಿಗೆ ದಿಟವಾಗಿ ತುಂಬ ಕೋಪ ಬಂದಿತ್ತು. ತನ್ನ ಕೋಪದ ಭರದಲ್ಲಿ ಆತನು ಶೂರ್ಪಣಖಿಯ ಕಿವಿ ಮತ್ತು ಮೂಗುಗಳನ್ನು ಕೊಯ್ದುಬಿಟ್ಟ.

ಕೋಪದಿಂದ, ನೋವಿನಿಂದ ಅರಚುತ್ತಾ ಶೂರ್ಪಣಖಿ ತನ್ನ ಸಹೋದರರು ಖರ ಮತ್ತು ದೂಷಣರ ಬಳಿಗೆ ಓಡಿ ಹೋದಳು. ರಾಮ ಲಕ್ಷ್ಮಣರಿಗೆ ಶಿಕ್ಷೆಯಾಗಬೇಕು ಎಂದು ಕೇಳಿದಳು.

ಅವರು ತನ್ನನ್ನು ಕೊಲ್ಲಲು ಬರುತ್ತಾರೆ ಎಂದು ರಾಮನಿಗೆ ತಿಳಿದೇ ಇತ್ತು. ಅವರನ್ನು ಎದುರಿಸಲು ಅವನೂ ಸಿದ್ಧನಾಗಿದ್ದ. ಲಕ್ಷ್ಮಣನೊಡನೆ ಸೀತೆಯನ್ನು ಸುರಕ್ಷಿತವಾದ ಒಂದು ಸ್ಥಳಕ್ಕೆ ಕಳುಹಿಸಿದ್ದ. ಲಕ್ಷ್ಮಣನಿಗೆ ತಾನು ಹಿಂದೆ ಉಳಿದು ಹೋರಾಡಬೇಕೆಂದು ಮನಸ್ಸು. "ಪ್ರಭೂ. ನೀನು ನಿನ್ನ ಹೆಂಡತಿಯನ್ನು ಕರೆದುಕೊಂಡು ಹೋಗು: ನಾನು ಈ ರಾಕ್ಷಸರನ್ನು ಎದುರಿಸಲು ಅಪ್ಪಣೆ ಕೊಡು." ಎಂದ. ಆದರೆ ರಾಮನು ಒಪ್ಪಲಿಲ್ಲ.

ಸ್ವಲ್ಪ ಹೊತ್ತಿನಲ್ಲಿ ಖರ ದೂಷಣರೂ ನೂರಾರು ರಾಕ್ಷಸರೂ ಅರಚುತ್ತ, ಬೊಬ್ಬೆಯಿಡುತ್ತ, ಧೂಳನ್ನೆಬ್ಬಿಸುತ್ತ ಬಂದರು. ಅವನು ಅವರೆಲ್ಲರನ್ನೂ ಕೊಂದು ಹಾಕಿದ. ದೂರದಿಂದ ನೋಡುತ್ತಿದ್ದ ಶೂರ್ಪಣಖಿ ಭಯವನ್ನು ಅರಿಯದ ರಾಮನನ್ನು ಕಂಡು ಬೆರಗಾದಳು.





ನೋವು ಮತ್ತು ಕೋಪಗಳಿಂದ ಅರಚುತ್ತ ಕಾಡಿನಲ್ಲಿ ಓಡಿದಳು. ತಮ್ಮ ಕಡೆಯ ಇಷ್ಟೊಂದು ಜನರ ಹತ್ಯೆಯ ಸುದ್ದಿಯನ್ನು ತನ್ನ ಅಣ್ಣ ರಾವಣನಿಗೆ ತಿಳಿಸಲು ಲಂಕೆಗೆ ದಾವಿಸಿದಳು.

ಅವಳ ಕಥೆಯನ್ನು ಕೇಳಿ ರಾವಣ ಉಗ್ರನಾದನು. "ಏನು ನಿನ್ನ ಮಾತಿನ ಅರ್ಥ?" ಅವನು ಅಬ್ಬರಿಸಿದ. "ಅವರನ್ನೆಲ್ಲ ಒಬ್ಬ ಮನುಷ್ಯ ಕೊಂದನೆ? ಅದು ಹೇಗೆ ಸಾಧ್ಯ?"

"ಅವರು ಸಾಮಾನ್ಯ ಮನುಷ್ಯರಲ್ಲ." ಶೂರ್ಪಣಖಿ ಎಂದಳು. "ಅವರು ಶಕ್ತರು. ಧೀರರು, ಆದರೆ ಬಡವರು; ನಾರು ಬಟ್ಟೆ ಉಟ್ಟಿದ್ದಾರೆ, ಗುಡಿಸಿಲಿನಲ್ಲಿ ವಾಸ ಮಾಡುತ್ತಾರೆ. ಸೀತೆ ಬಹು ಚೆಲುವೆ, ಅವಳು ನಿನ್ನ ರಾಣಿಯಾಗಿ ಬಂಗಾರದ ಅರಮನೆಗಳಲ್ಲಿರಬೇಕಾದ ರೂಪಸಿ, ರಾಮನೊಡನೆ ಗುಡಿಸಿಲಿನಲ್ಲಿ ಇರಬೇಕಾದವಳಲ್ಲ."

ತನ್ನ ತಂಗಿಗಾದ ಅವಮಾನದ ಮುಯ್ಯಿ ತೀರಿಸಲು ರಾವಣ ಒಂದು ಯೋಚನೆ ಮಾಡಿದ.

ಬಿಳಿಯ ಹೇಸರಗತ್ತೆಗಳು ಎಳೆಯುತ್ತಿದ್ದ ತನ್ನ ರಥವನ್ನು ಅಣಿಗೊಳಿಸುವಂತೆ ಅಪ್ಪಣೆ ಮಾಡಿದ. ತನ್ನ ಮಾವ ಕುತಂತ್ರಿ ಮಾರೀಚನ ಬಳಿಗೆ ಹೋದ. ತನಗೆ ಇಷ್ಟ ಬಂದ ರೂಪವನ್ನು ಧರಿಸುವ ಶಕ್ತಿ ಇತ್ತು ಮಾರೀಚನಿಗೆ.

ರಾವಣ ಹೇಳಿದ, "ಬಂಗಾರದ ಜಿಂಕೆಯ ರೂಪ ಧರಿಸಿ ಪಂಚವಟಿಗೆ ಹೋಗು. ಸೀತೆಯು ಗುಡಿಸಲಿನ ಹತ್ತಿರ ಆಡುತ್ತಿರು. ಬಂಗಾರದ ಜಿಂಕೆಯನ್ನು ತಂದುಕೊಡು ಎಂದು ಅವಳು ರಾಮನನ್ನು ಕೇಳುವುದು ಖಂಡಿತ. ಆಗ ನೀನು ಕಾಡಿನ ಬೇರೊಂದು ಭಾಗಕ್ಕೆ ಓಡಿ ಹೋಗು, ರಾಮನು ನಿನ್ನನ್ನು ಬೆನ್ನಟ್ಟುವನು. ನೀನು ಸ್ವಲ್ಪ ದೂರ ಹೋದ ಮೇಲೆ, ರಾಮನ ಧ್ವನಿ

ಯಲ್ಲಿ, ಸಹಾಯಕ್ಕೆ ಬರುವಂತೆ ಲಕ್ಷ್ಮಣನನ್ನು ಕೂಗು. ಅಣ್ಣನ ಸಹಾಯಕ್ಕೆ ಲಕ್ಷ್ಮಣನು ಹೋದಾಗ ಸೀತೆಯೊಬ್ಬಳೇ ಇರುತ್ತಾಳೆ. ಆಗ ನಾನು ಸನ್ಯಾಸಿಯ ವೇಷ ಧರಿಸಿ ಅವಳನ್ನು ಹೊತ್ತುಕೊಂಡು ಹೋಗುತ್ತೇನೆ."

ಮಾರೀಚನಿಗೆ ಭಯ, ಇಷ್ಟವಿಲ್ಲ. ಆದರೆ ರಾವಣನು, "ನೀನು ಹೀಗೆ ಮಾಡಿದರೆ ನಿನಗೆ ಬಹುಮಾನ ಕೊಡುತ್ತೇನೆ. ಒಪ್ಪದೆಹೋದೆಯೊ ಕೊಂದುಬಿಡುತ್ತೇನೆ" ಎಂದು ಬಲಾತ್ಕಾರಮಾಡಿದ. ಮಾರೀಚನಿಗೆ ಅವನು ಹೇಳಿದಂತೆ ಕೇಳದೆ ಬೇರೆ ದಾರಿಯೇ ಇರಲಿಲ್ಲ.

ಒಡವೆಗಳನ್ನು ಒತ್ತಿದ ಬಂಗಾರದಂತಹ ಮೈಬಣ್ಣದ ಜಿಂಕೆಯನ್ನು ಕಂಡು ಸೀತೆ ಅದು ತನಗೆ ಬೇಕು ಎಂದಳು. ಆದರೆ ಲಕ್ಷ್ಮಣನಿಗೆ ಸಂಶಯ. "ಅದೊಂದು ರಾಕ್ಷಸರ ಮಾಯೆ ಇರಬೇಕು. ಅಣ್ಣಾ ಅದಕ್ಕೆ ಲಕ್ಷ್ಯ ಕೊಡಬೇಡ" ಎಂದ.

ಆದರೆ ಸೀತೆ. "ಹೋಗು ಪ್ರಭೂ. ಅದು ಜೀವಸಹಿತ ನಿನ್ನ ಕೈಗೆ ಸಿಕ್ಕದಿದ್ದರೆ ಬಾಣ ಬಿಟ್ಟು ಕೊಲ್ಲು. ಅದರ ಚರ್ಮ ಬಹು ಸುಂದರವಾಗಿದೆ" ಎಂದು ಬಲಾತ್ಕಾರ ಮಾಡಿದಳು.



ಕಡೆಗೆ, ತನಗಾಗಿ ಅಷ್ಟೊಂದು ಕಷ್ಟಗಳನ್ನು ಸಹಿಸಿದ್ದ ಅವಳ ಆಸೆಯನ್ನು ನಿರಾಕರಿಸ ಲಾರದೆ ರಾಮನು ಒಪ್ಪಿದ. ತನ್ನ ಬಿಲ್ಲು ಬಾಣಗಳನ್ನು ತೆಗೆದುಕೊಂಡ, ಲಕ್ಷ್ಮಣನಿಗೆ, "ಸೀತೆ ಯನ್ನು ನೋಡಿಕೊ, ಏನೇ ಆಗಲಿ, ಅವಳನ್ನು ಒಂಟಿಯಾಗಿ ಬಿಡಬೇಡ" ಎಂದು ಹೇಳಿದ. ಚಿನ್ನದ ಜಿಂಕೆಯನ್ನು ಅಟ್ಟಿಸಿಕೊಂಡು ಹೊರಟ, ಅದು ಕೂಡಲೇ ಓಡಿಹೋಯಿತು.

ರಾವಣನ ಹಂಚಿಕೆಯೂ ಇದೇ. ಜಿಂಕೆ ತನ್ನ ಕೈಗೆ ಸಿಕ್ಕುವುದಿಲ್ಲ ಎಂದು ರಾಮನಿಗೆ ಅರ್ಥವಾಗುತ್ತಲೆ ಅವನು ಬಾಣವನ್ನು ಪ್ರಯೋಗಿಸಿದ. ಬಾಣ ಅವನ ಹೃದಯವನ್ನು ಚುಚ್ಚಿದಾಗ ಮಾರೀಚನು ತನ್ನ ಮಾನವ ರೂಪವನ್ನು ಧರಿಸಿದ, ರಾಮನ ಧ್ವನಿಯಲ್ಲಿ, 'ಲಕ್ಷ್ಮಣಾ, ಸಹಾಯ ಮಾಡು, ಸಹಾಯ ಮಾಡು' ಎಂದು ಕೂಗಿಕೊಂಡ. ಆ ಮಾತು ಗಳನ್ನು ಹೇಳುತ್ತಿರುವಂತೆಯೇ ಪ್ರಾಣಬಿಟ್ಟ.

ತನ್ನನ್ನು ಬೇರೆಡೆಗೆ ಕರೆದೊಯ್ಯಲು ಮಾಡಿದ ಉಪಾಯ ಇದು ಎಂದು ಕೂಡಲೇ ರಾಮನಿಗೆ ಹೊಳೆಯಿತು. ಮನಸ್ಸು ಆತಂಕಗೊಂಡಿತು; ವೇಗವಾಗಿ ಹಿಂದಕ್ಕೆ ಹೊರಟ.

ಸಾಯುತ್ತಿದ್ದ ಮಾರೀಚನ ಕೂಗು ಸೀತೆಗೂ ಕೇಳಿಸಿತ್ತು. ಅವಳಿಗೆ ದಿಕ್ಕು ತೋರದಾ ಯಿತು. "ಹೋಗು ಲಕ್ಷ್ಮಣಾ, ನಿನ್ನ ಅಣ್ಣ ವಿಪತ್ತಿನಲ್ಲಿದ್ದಾನೆ" ಎಂದಳು.

ಲಕ್ಷ್ಮಣನು, "ಇಲ್ಲ, ಇದು ನನ್ನನ್ನು ಇಲ್ಲಿಂದ ಹೊರಡಿಸಲು ಉಪಾಯ ಅಷ್ಟೇ" ಎಂದು ಉತ್ತರಿಸಿದ.

ಸೀತೆಗೆ ಕೋಪ ಬಂದಿತು. "ರಾಮ ಸಾಯಬೇಕು ಎಂದು ನಿನ್ನ ಇಷ್ಟವೇನು?" ಎಂದು ಅವನನ್ನು ಮೂದಲಿಸಿದಳು.

ಲಕ್ಷ್ಮಣನ ಮನಸ್ಸಿಗೆ ನೋವಾಯಿತು. "ನಿನಗೆ ಇನ್ನೇನು ಕಷ್ಟಗಳು ಕಾದಿವೆಯೊ ದೇವರಿಗೇ ಗೊತ್ತು" ಎನ್ನುತ್ತ ಅಲ್ಲಿಂದ ಹೊರಟ.



# ರಾವಣನಿಂದ ಸೀತೆಯ ಅಪಹಾರ

ಲಕ್ಷ್ಮಣನು ಇನ್ನೂ ಕಣ್ಮರೆಯಾಗಿದ್ದನೋ ಇಲ್ಲವೋ, ಸನ್ಯಾಸಿಯ ವೇಷದಲ್ಲಿ ರಾವಣನು ಕಾಣಿಸಿಕೊಂಡ. ಸೀತೆ ಅವನನ್ನು ಗೌರವದಿಂದ ಬರಮಾಡಿಕೊಂಡಳು.

"ಯಾರು ನೀನು?" ರಾವಣನು ಕೇಳಿದ, "ರಾಕ್ಷಸರು ತುಂಬಿರುವ ಈ ಕಾಡಿನಲ್ಲಿ ಒಬ್ಬಳೇ ಏಕಿದ್ದೀಯೆ?"

ತಾನು ಉತ್ತರ ಹೇಳದಿದ್ದರೆ ಸನ್ಯಾಸಿ ಕೋಪದಿಂದ ಶಾಪ ಕೊಡಬಹುದೆಂದು ಸೀತೆಗೆ ಹೆದರಿಕೆಯಾಯಿತು. ತಾನು ಯಾರು, ಕಾಡಿನಲ್ಲಿ ಏಕೆ ಇದ್ದೇನೆ ಎಂದು ಅವನಿಗೆ ಹೇಳಿದಳು.

ಅನಂತರ ಅವಳು ಕೇಳಿದಳು, "ನೀವು ಯಾರು? ರಾಕ್ಷಸರು ತುಂಬಿರುವ ಈ ಕಾಡಿನಲ್ಲಿ ಒಂಟಿಯಾಗಿ ಏಕೆ ಅಲೆಯುತ್ತಿದ್ದೀರಿ?"

"ನಾನು ಲಂಕೆಯ ರಾವಣ, ರಾಕ್ಷಸರ ರಾಜ," ಅವನು ಉತ್ತರ ಹೇಳಿದ. "ನನ್ನ ಹೆಸರನ್ನು ಕೇಳಿದರೆ ದೇವತೆಗಳೂ ನಡುಗುತ್ತಾರೆ." ಹೀಗೆಂದ ಬಳಿಕ ಅವನೆಂದ, "ಬಂಗಾರದ ಊರು ಲಂಕೆ, ನೀನು ಅಲ್ಲಿಗೆ ಬಂದು ನನ್ನ ರಾಣಿಯಾಗಬೇಕು ಎಂದು ನನ್ನ ಅಪೇಕ್ಷೆ."

ಸೀತೆಗೆ ತಡೆಯಲಾರದಷ್ಟು ಕೋಪ ಬಂದಿತು. ಹೆಮ್ಮೆಯಿಂದ ಅವಳು ನುಡಿದಳು "ನಾನು ರಾಮನ ಹೆಂಡತಿ. ಹೊರಟು ಹೋಗು ಇಲ್ಲಿಂದ, ಇಲ್ಲವಾದರೆ ನಿನಗೆ ನೀನೇ ವಿನಾಶವನ್ನು ತಂದುಕೊಳ್ಳುವೆ."

ರಾವಣ ಅವಳನ್ನು ಹಿಡಿದು ಬಲಾತ್ಕಾರದಿಂದ ತನ್ನ ರಥಕ್ಕೆ ಸೆಳೆದುಕೊಂಡು, ಅಲ್ಲಿಂದ ದಾವಿಸಿದ. ಜಟಾಯು ಎಂಬುದೊಂದು ಮಹಾ ಪಕ್ಷಿ, ಅದು ದಶರಥನ ಸ್ನೇಹಿತ; ಜಟಾಯು ರಾವಣನ ಮೇಲೆ ಎರಗಿದ. ನಿದ್ರೆ ಮಾಡುತ್ತಿದ್ದ ಜಟಾಯುವಿಗೆ ಸೀತೆಯ ಆಕ್ರಂದನ ಕೇಳಿಸಿ ಎಚ್ಚರಿಕೆಯಾಗಿತ್ತು. ಅವನು ಭೀಕರವಾಗಿ ಹೋರಾಡಿದ. ರಾವಣನ ರಥವನ್ನು ಮುರಿದು ಅವನ ಸಾರಥಿಯನ್ನೂ ಹೇಸರಗತ್ತೆಗಳನ್ನೂ ಕೊಂದುಹಾಕಿದ. ಆದರೆ ಜಟಾಯುವಿಗೆ ಮುಪ್ಪು, ರಾವಣನಿಗೆ ಅವನು ಸಾಟಿಯಾಗಲಿಲ್ಲ. ರಾವಣನು ಅವನ ರೆಕ್ಕೆಗಳನ್ನು ಕತ್ತರಿಸಿ ಸಾಯುವಂತೆ ಹೊಡೆದ; ಜಟಾಯು ನೆಲಕ್ಕ ಬಿದ್ದು ಸಾಯುವಂತಾದ. ರಾವಣನು ಸೀತೆಯನ್ನು ತನ್ನ ತೋಳುಗಳಲ್ಲಿ ಭದ್ರವಾಗಿ ಹಿಡಿದು ದಕ್ಷಿಣ ದಿಕ್ಕಿನಲ್ಲಿ ಹಾರಿಹೋದ.

ಈಗ ಯಾರೂ ತನ್ನ ನೆರವಿಗೆ ಬರುವುದಿಲ್ಲ ಎಂದು ಸೀತೆಗೆ ಅರ್ಥವಾಯಿತು, ಅವಳಿಗೆ ಭಯವಾಯಿತು. ನಿರಾಸೆಯಿಂದ ಸುತ್ತ ನೋಡಿದಳು. ತನ್ನ ಕೆಳಗೆ ಒಂದು ಬೆಟ್ಟದ ಮೇಲೆ ಇದ್ದ ಐದು ಕೋತಿಗಳು ಅವಳ ಕಣ್ಣಿಗೆ ಬಿದ್ದವು. ಕೂಡಲೆ ಅವಳು ತಾನು ಹೊದ್ದುಕೊಳ್ಳುವ ವಸ್ತ್ರವನ್ನೂ ಕಾಲಂದಿಗೆಗಳನ್ನೂ ಇತರ ಒಡವೆಗಳನ್ನೂ ಕೆಳಕ್ಕೆ ಎಸೆದಳು; ವಾನರರು ಅವನ್ನು ಎತ್ತಿಕೊಳ್ಳಬಹುದೆಂದು ಅವಳ ಆಸೆ. ತನ್ನನ್ನು ಹುಡುಕಿಕೊಂಡು ರಾಮ ಲಕ್ಷ್ಮಣರು ಬರುತ್ತಾರೆ ಎಂದು ಅವಳಿಗೆ ಖಚಿತವಾಗಿತ್ತು. ಅವರು ಈ ವಾನರರನ್ನು ಕಂಡು ಈ ಆಭರಣಗಳನ್ನು ನೋಡಿದರೆ, ರಾವಣನು ತನ್ನನ್ನು ಅಪಹರಿಸಿಕೊಂಡು ಯಾವ ಕಡೆ ಹೋದ ಎಂಬುದು ಅವರಿಗೆ ಗೊತ್ತಾಗುವುದು.

ಸ್ವಲ್ಪ ಕಾಲದಲ್ಲಿ ರಾವಣನು ಲಂಕೆಯನ್ನು ಸೇರಿದ. ಅವನು ಸೀತೆಯ ಕಡೆಗೆ ತಿರುಗಿ ಹೇಳಿದ, "ಇಲ್ಲಿಂದ ರಾಮ ನಿನ್ನನ್ನು ರಕ್ಷಿಸಲು ಸಾಧ್ಯವೇ ಇಲ್ಲ. ಈ ನನ್ನ ಚಿನ್ನದ ಅರಮನೆಯಲ್ಲಿ ಆಳುತ್ತ ನನ್ನ ರಾಣಿಯಾಗಿ ಇರುತ್ತೀಯೊ ಇಲ್ಲವೇ ರಾಮನಿಗಾಗಿ ಕಾಯುತ್ತೀಯೋ? ಈಗ ತೀರ್ಮಾನಿಸು ಸೀತೆ."





ಸೀತೆ ಹೆಮ್ಮೆಯಿಂದ ಉತ್ತರ ಹೇಳಿದಳು, "ನಾನು ರಾಮನ ಹೆಂಡತಿ: ನನಗೆ ನಿನ್ನ ಸಂಪತ್ತು ಬೇಡ."

ರಾವಣನು ಸೀತೆಯನ್ನು ರಾಕ್ಷಸಿಯರ ಕಾವಲಿನಲ್ಲಿ ಬಿಟ್ಟ. ಅವರಿಗೆ ಅಪ್ಪಣೆ ಮಾಡಿದ, "ಅವಳಿಗೆ ಅಪಾಯ ಮಾಡಬೇಡಿ. ಅವಳು ವಸ್ತ್ರಗಳನ್ನೋ ಒಡವೆಗಳನ್ನೋ ಕೇಳಿದರೆ ಅತ್ಯುತ್ತಮವಾದುದನ್ನೆ ಕೊಡಿ. ಆದರೆ ಅವಳು ಯಾರನ್ನಾದರೂ ನೋಡಲು ಅಥವಾ ಯಾರೊಂದಿಗಾದರೂ ಮಾತನಾಡಲು ಅವಕಾಶ ಕೊಡಬೇಡಿ."

ರಾವಣ ತನ್ನ ಅರಮನೆಗೆ ಹಿಂದಿರುಗಿ ಅತಿ ಬಲಿಷ್ಠರಾದ ಮತ್ತು ಬಹು ಗಟ್ಟಿ ಮನಸ್ಸಿನ ಎಂಟು ಮಂದಿ ರಾಕ್ಷಸರನ್ನು ಕರೆಸಿದ. "ಆ ಕ್ಷುದ್ರ ರಾಮಲಕ್ಷ್ಮಣರು ಜನಾಸ್ಥಾನದಲ್ಲಿದ್ದಾರೆ. ಅಲ್ಲಿಗೆ ಹೋಗಿ ಎಚ್ಚರಿಕೆಯಿಂದ ಅವರ ಮೇಲೆ ಕಣ್ಣಿಟ್ಟಿರಿ. ಅವಕಾಶ ಸಿಕ್ಕಾಗ ರಾಮನನ್ನು ಕೊಂದುಬಿಡಿ" ಎಂದು ಅವರಿಗೆ ಹೇಳಿದ.

ರಾವಣನು ಸೀತೆಯ ಬಳಿಗೆ ಹಿಂದಿರುಗಿದ. ಅವಳು ತನ್ನ ಸುಂದರ ಅರಮನೆಗಳಲ್ಲಿ ಸುತ್ತಾಡಿ, ಕಣ್ಣಾರೆ ಅವನ ಅದ್ಭುತ ನಿಧಿಗಳನ್ನು ಕಾಣುವಂತೆ ಬಲಾತ್ಕಾರ ಮಾಡಿದ. ಇದರಿಂದ ಅವಳು ಮನಸೋಲಬಹುದು ಎಂದು ಅವನ ಆಸೆ. ಆದರೆ ರಾವಣನು, "ಸೀತೆ, ನನ್ನ ರಾಣಿಯಾಗು, ಇವೆಲ್ಲ ನಿನ್ನವಾಗುತ್ತವೆ" ಎಂದಾಗ ಅವಳು ತಿರಸ್ಕಾರದಿಂದ ನಿರಾಕರಿಸಿದಳು.

"ಎಂದೆಂದಿಗೂ ಇಲ್ಲ. ನಾನು ರಾಮನ ಹೆಂಡತಿ. ಅವನು ಬಂದು ನನ್ನನ್ನು ರಕ್ಷಿಸು

ವನು. ಅವನು ನಿನ್ನನ್ನು ಕೊಂದು ಲಂಕೆಯನ್ನು ನಾಶ ಮಾಡುವನು. ನೀನು ನನ್ನನ್ನು ಕೊಲ್ಲಬಹುದು, ಆದರೆ ಎಂದೆಂದೂ ನಾನು ನಿನ್ನ ರಾಣಿಯಾಗುವುದಿಲ್ಲ."

ಈ ಮಾತುಗಳಿಂದ ರಾವಣನಿಗೆ ಬಹು ಕೋಪ ಬಂದಿತು. ಅವನು ಕಠಿಣವಾಗಿ ಹೇಳಿದ, "ಕೇಳು, ಹೆಂಗಸೇ, ನಿನಗೆ ಒಂದು ವರ್ಷ ಕಾಲ ಕೊಟ್ಟಿದ್ದೇನೆ. ಆದರೂ ನೀನು ಒಪ್ಪದಿದ್ದರೆ, ನಿನ್ನನ್ನು ಕೊಂದು ತುಂಡುತುಂಡು ಮಾಡಿ ನನಗೆ ಆಹಾರಕ್ಕಾಗಿ ಬೇಯಿಸಿಬಿಡುತ್ತಾರೆ."



ಹೀಗೆ ಹೇಳಿ ರಾವಣನು ಸೀತೆಯನ್ನು ಅಶೋಕ ವನಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅವಳನ್ನು ಬಂಧನದಲ್ಲಿ ಇಡುವಂತೆ ರಾಕ್ಷಸಿಯರಿಗೆ ಅಪ್ಪಣೆ ಮಾಡಿ ಕೋಪದಿಂದ ಹೊರಟು ಹೋದ. "ಅವಳನ್ನು ಕೊಲ್ಲಬೇಡಿ, ಅವಳಿಗೆ ಕೆಡುಕು ಮಾಡಬೇಡಿ, ಆದರೆ ಅವಳ ಅಹಂಕಾರ ವನ್ನು ಮುರಿಯಿರಿ." ಎಂದು ರಾಕ್ಷಸಿಯರಿಗೆ ಹೇಳಿದ.

ಅವರು ತಮ್ಮಿಂದಾದಷ್ಟೂ ಅವಳಿಗೆ ಚಿತ್ರಹಿಂಸೆ ಮಾಡಿದರು, ಅಪಮಾನ ಮಾಡಿದರು. ಆದರೆ ಸೀತೆಯ ಮನಸ್ಸು ಬದಲಾಗುವಂತೆ ಮಾಡಲು ಅವರಿಂದ ಸಾಧ್ಯವಾಗಲಿಲ್ಲ.

ಈ ಮಧ್ಯೆ ಗುಡಿಸಲಿಗೆ ಹಿಂದಿರುಗುತ್ತಿದ್ದ ರಾಮನು ಅರ್ಧ ದಾರಿಯಲ್ಲಿ ಲಕ್ಷ್ಮಣನು ತನ್ನ ಕಡೆಗೆ ಧಾವಿಸಿ ಬರುತ್ತಿರುವುದನ್ನು ಕಂಡ. ಅವನನ್ನು ನೋಡುತ್ತಲೇ ತಾನು ಹೆದರಿ ದಂತೆಯೇ ಆಯಿತು ಎಂದು ರಾಮನಿಗೆ ಹೊಳೆಯಿತು.

ಲಕ್ಷ್ಮಣ ಹೇಳಿದ ವೃತ್ತಾಂತವನ್ನು ರಾಮನು ಕೇಳಿದ, ಅನಂತರ "ಕೋಪ ಮಾಡಿಕೊಂಡ ಹೆಂಗಸಿನ ಮಾತನ್ನು ನೀನು ಕೇಳಬಾರದಾಗಿತ್ತು. ಈಗ ಬೇಗನೆ ಹೋಗೋಣ" ಎಂದ.

ಅವರು ಗುಡಿಸಿಲನ್ನು ತಲಪುತ್ತಲೇ ಅದು ಬಿಕೋ ಎನ್ನುತ್ತಿದೆ ಎನ್ನಿಸಿತು ರಾಮನಿಗೆ, ಕೂಡಲೇ, 'ಸೀತೆ ಸೀತೆ, ಎಲ್ಲಿದ್ದೀಯೆ?' ಎಂದು ಕೂಗಿದ. ಗಿಡಗಳಲ್ಲಿ ಗಾಳಿಯು ನಿಟ್ಟುಸಿರಿನ ಶಬ್ದ ಹೊರತಾಗಿ ಅವರಿಗೆ ಯಾವ ಉತ್ತರವೂ ಬರಲಿಲ್ಲ. ಸೀತೆಯ ಹೆಸರನ್ನು ಹಿಡಿದು ಕೂಗುತ್ತ ಎಲ್ಲ ಕಡೆ ಹುಡುಕಿದರು ಅವರು. ದುಃಖದಿಂದ ಬಳಲಿ, ಅವರು ಕಾಡಿನಲ್ಲಿ ತಮಗೆ ಪ್ರಿಯವಾಗಿದ್ದ ಸ್ಥಳಗಳಿಗೆ ಹೋದರು. ಆದರೆ ಸೀತೆ ಎಲ್ಲಿಯೂ ಇರಲಿಲ್ಲ.

ರಾಮನು ದುಃಖದಿಂದ ಮೈಮರೆತ. "ನಾನು ಅಯೋಧ್ಯೆಗೆ ಹೇಗೆ ಹೋಗಲಿ! ಜನಕ ಮಹಾರಾಜನನ್ನು ಹೇಗೆ ನೋಡಲಿ?" ಎಂದು ಅತ್ತ. ಸೀತೆ ಎಲ್ಲಿ ಎಂದು ಹೇಳಿ ಎಂದು ಮರಗಳನ್ನೂ ಹೊಳೆಗಳನ್ನೂ ಬಂಡೆಗಳನ್ನೂ ಬೇಡುತ್ತಾ ಒಂದು ಕಡೆಯಿಂದ ಇನ್ನೊಂದು ಕಡೆಗೆ ನಿರಾಸೆಯಿಂದ ಓಡಿದ.

ಇನ್ನು ಲಕ್ಷ್ಮಣನಿಗೆ ತಡೆಯಲಾಗಲಿಲ್ಲ. "ರಾಮಾ, ಎಲ್ಲ ಮನುಷ್ಯರಿಗೆ ಆದರ್ಶನಾದ ನೀನು ಹೀಗೆ ಗೋಳಾಡಬೇಡ. ನಾವು ಸೀತೆ ಎಲ್ಲಿದ್ದಾಳೆ ಎಂದು ಕಂಡುಹಿಡಿದೇ ಹಿಡಿಯು ತ್ತೇವೆ; ಅವಳನ್ನು ರಕ್ಷಿಸುತ್ತೇವೆ."

ಜಿಂಕೆಗಳ ಗುಂಪೊಂದು ಅವರಿಗೆ ಕಾಣಿಸಿತು. ಅವು ದಕ್ಷಿಣ ದಿಕ್ಕಿಗೆ ಮುಖ ಮಾಡಿದ್ದವು. "ನೋಡು," ಲಕ್ಷ್ಮಣ ಹೇಳಿದ, "ನಮಗೆ ಏನನ್ನೋ ಹೇಳಲು ಪ್ರಯತ್ನ ಮಾಡುತ್ತಿವೆ ಇವು. ನಮ್ಮತ್ತ ತಲೆ ಎತ್ತಿ ನೋಡಿ ದಕ್ಷಿಣ ದಿಕ್ಕನ್ನು ನೋಡುತ್ತಿವೆ. ಸೀತೆ ದಕ್ಷಿಣದಲ್ಲಿ ಇರಬೇಕು."

ಅವರು ದಕ್ಷಿಣಕ್ಕೆ ಹೊರಟರು. ಸ್ವಲ್ಪ ಕಾಲದ ನಂತರ ಮುರಿದ ರಥ, ಸತ್ತ ಸಾರಥಿ ಮತ್ತು ಹೇಸರಗತ್ತೆಗಳು ಬಿದ್ದಿದ್ದ ಸ್ಥಳಕ್ಕೆ ಬಂದರು.

"ಸ್ವಲ್ಪ ಹೊತ್ತಿನ ಮೊದಲು ಇಲ್ಲೊಂದು ಹೋರಾಟ ನಡೆದಿರಬೇಕು" ರಾಮ ಹೇಳಿದ. "ನೋಡಿಲ್ಲಿ, ಹಿಸುಕಿ ಹೋದ ಈ ಪುಷ್ಪ ಮಾಲೆ ಸೀತೆಯದು! ಅಯ್ಯೋ ವಿಧಿಯೇ! ರಾಕ್ಷಸರು ಅವಳನ್ನು ತಿಂದುಬಿಟ್ಟಿರಬೇಕು!"

ಅವರು ಸುತ್ತುಮುತ್ತಲೂ ನೋಡಿದರು. ರೆಕ್ಕೆ ಮುರಿದು ನೆಲದ ಮೇಲೆ ಉರುಳಿದ್ದ ಮಹಾಪಕ್ಷಿ ಜಟಾಯುವನ್ನು ಕಂಡರು. ರಾಮನು ಮುಂದೆ ಓಡಿ ಹೋದ. ಆದರೆ ಜಟಾಯು ಸಾಯುವ ಸ್ಥಿತಿಯಲ್ಲಿದ್ದ.

"ಯಾರಿಂದ ಹೀಗಾಯಿತು?" ಲಕ್ಷ್ಮಣ ಕೇಳಿದ.



ಬಹು ಕಷ್ಟದಿಂದ ಜಟಾಯು ಉತ್ತರ ಹೇಳಿದ, "ರಾಕ್ಷಸರ ರಾಜ ರಾವಣನೊಡನೆ ನಾನು ಹೋರಾಡಿದೆ. ಅವನು ನಿನ್ನ ಹೆಂಡತಿಯನ್ನು ದಕ್ಷಿಣಕ್ಕೆ ಕರೆದೊಯ್ದಿದ್ದಾನೆ." ಅನಂತರ ಕ್ಷೀಣವಾದ ಧ್ವನಿಯಲ್ಲಿ, "ನಾನು ಸಾಯುವ ಮೊದಲು ನಿನ್ನನ್ನು ನೋಡಿದೆನಲ್ಲ ಅದೇ ಸಂತೋಷ" ಎಂದು ಹೇಳಿದ. ಈ ಮಾತುಗಳನ್ನಾಡುತ್ತಿದ್ದಂತೆ ವೀರ ಜಟಾಯು ಮಡಿದ.

ಅಣ್ಣ ತಮ್ಮಂದಿರು ದುಃಖದಿಂದ ಅವನ ಅಂತ್ಯ ಸಂಸ್ಕಾರಗಳನ್ನು ಮಾಡಿದರು. "ನಾನು ನಿಜವಾಗಿ ನಿರ್ಭಾಗ್ಯ," ರಾಮನು ಹೇಳಿದ, "ನನ್ನಿಂದ ನನಗೆ ಮಾತ್ರ ಕಷ್ಟವಲ್ಲ, ನನ್ನ ಸ್ನೇಹಿತರಿಗೆಲ್ಲ ಕಷ್ಟವೇ."

"ಇದು ಅಳುವುದಕ್ಕೆ ಸಮಯವಲ್ಲ, ಪ್ರಭೂ," ಲಕ್ಷ್ಮಣ ಹೇಳಿದ. "ಮಾಡಬೇಕಾದ ಕೆಲಸ ಉಂಟು".

ಅಲ್ಲಿಂದ ಅವರು ದಕ್ಷಿಣಕ್ಕೆ ಹೊರಟರು. ದಾರಿಯಲ್ಲಿ ಹಲವು ಅಪಾಯಗಳನ್ನು ಎದುರಿಸಿದರು, ಎಲ್ಲವನ್ನೂ ಗೆದ್ದರು. ವಿಕಾರ ರೂಪದ ಕಬಂಧ ಅವರ ಮೇಲೆ ಎರಗಿದ. ಅವನಿಗೆ ಕುತ್ತಿಗೆಯೇ ಇರಲಿಲ್ಲ, ರುಂಡ, ಮುಂಡ ಎರಡೂ ಒಂದೇ. ಅವನಿಗಿದ್ದುದು ಒಂದೇ ಕಣ್ಣು; ಹಲ್ಲುಗಳು ಮುಂದಕ್ಕೆ ಚಾಚಿದ್ದುವು; ನಾಲಿಗೆ ಸರ್ಪದ ನಾಲಿಗೆಯಂತೆ. ಅವನು ತನ್ನ ಉದ್ದವಾದ ಕೈಗಳಿಂದ ತಾನು ಆಹುತಿ ತೆಗೆದುಕೊಳ್ಳುವ ಬಡ ಪ್ರಾಣಿಗಳನ್ನು ಆವರಿಸುತ್ತಿದ್ದ; ಹೀಗೆ ಅವರನ್ನು ಸೆರೆಹಿಡಿದು ಅವರನ್ನು ಬಾಯಿಯಲ್ಲಿ ತುರುಕಿಕೊಳ್ಳುತ್ತಿದ್ದ. ರಾಮ ಲಕ್ಷ್ಮಣರು ಅವನನ್ನು ಹೊಡೆದುರುಳಿಸಿದಾಗ ಅವರು ಯಾರು ಎಂದು ಕೇಳಿದ.

ಅವರು ಉತ್ತರ ಕೊಟ್ಟರು: "ಅಯೋಧ್ಯೆಯ ರಾಮ ಮತ್ತು ಅವನ ತಮ್ಮ ಲಕ್ಷ್ಮಣ. ರಾವಣ ಕದ್ದು ಕರೆದುಕೊಂಡು ಹೋಗಿರುವ ಸೀತೆಯನ್ನು ಹುಡುಕುತ್ತಿದ್ದೇವೆ."

ಇದನ್ನು ಕೇಳಿ ಕಬಂಧನು, "ನಾನು ರಾಮನನ್ನು ಕಂಡೆ, ಇನ್ನು ನನ್ನ ಆತ್ಮ ಈ ಹಾಳು ದೇಹವನ್ನು ಬಿಡಬಹುದು. ಪಂಪಾ ಸರೋವರದ ಬಳಿ ಋಷ್ಯಮೂಕ ಪರ್ವತಕ್ಕೆ ಹೋಗಿ. ಅಲ್ಲಿ ರಾಜ್ಯಭ್ರಷ್ಟನಾದ ವಾನರ ರಾಜ ಸುಗ್ರೀವನನ್ನು ಸಂಧಿಸುವಿರಿ. ಅವನು ನಿಮಗೆ ನೆರವಾಗುವನು," ಎಂದನು. ಕಬಂಧನ ಪ್ರಾಣ ಹಾರಿಹೋಯಿತು.

ಋಷ್ಯಮೂಕಕ್ಕೆ ಹೋಗುವ ದಾರಿಯಲ್ಲಿ ಅವರಿಗೆ ಮತಂಗ ಋಷಿಯ ಆಶ್ರಮ ಸಿಕ್ಕಿತು. ಕೃಶಳಾಗಿದ್ದ ಮುದುಕಿ ಶಬರಿ ಎಂಬವಳು ಒಬ್ಬಳೇ ಅಲ್ಲಿ ವಾಸಿಸುತ್ತಿದ್ದಳು. ಅವಳು ಮತಂಗ ಋಷಿಯ ಶಿಷ್ಯೆ. ರಾಮನನ್ನು ಕಾಣಬೇಕೆಂದು ಜೀವನದುದ್ದಕ್ಕೂ ಹಂಬಲಿಸುತ್ತ ಕಾದಿದ್ದಳು. ಅವಳು ಅವರಿಗೆ ಆಹಾರ ಕೊಟ್ಟು, ಇರಲು ಸ್ಥಳ ಕೊಟ್ಟು, ವಾತ್ಸಲ್ಯದಿಂದ ನೋಡಿಕೊಂಡಳು. ಮರು ಬೆಳಗ್ಗೆ ಅವರು ಹೊರಟಾಗ ಭೂಮಿಯ ಮೇಲೆ ಅವಳ ಕಾರ್ಯವೂ ಮುಗಿಯಿತು, ಅವಳೂ ಸತ್ತುಹೋದಳು.

# ಸುಗ್ರೀವ ಮತ್ತು ರಾಮ

ವಾಲಿ ಮತ್ತು ಸುಗ್ರೀವರು ಕಿಷ್ಕಿಂಧೆಯ ವಾನರ ರಾಜನ ಮಕ್ಕಳು. ತಂದೆ ತೀರಿಕೊಂಡ ನಂತರ ಅಣ್ಣ ವಾಲಿ ರಾಜನಾದ. ಸುಗ್ರೀವ ನಿಷ್ಠೆಯಿಂದ ಅವನಿಗೆ ನೆರವಾದ. ಆದರೆ ಅಣ್ಣ ತಮ್ಮಂದಿರಲ್ಲಿ ಜಗಳವಾಯಿತು. ವಾಲಿ ಸುಗ್ರೀವನನ್ನು ಕಿಷ್ಕಿಂಧೆಯಿಂದ ಹೊರಕ್ಕೆ ಅಟ್ಟಿದ. ತನ್ನ ಹಿಂಬಾಲಕರು ಐವರೊಂದಿಗೆ ಸುಗ್ರೀವ ಋಷ್ಯಮೂಕ ಪರ್ವತದಲ್ಲಿ ರಕ್ಷಣೆ ಪಡೆದ. ವಾಲಿ ಬೆನ್ನಟ್ಟಿ ಬರುವನೆಂಬ ಭಯದಲ್ಲಿಯೇ ಅವರು ಅಲ್ಲಿ ವಾಸ ಮಾಡುತ್ತಿದ್ದರು.

ಆಯಾಸದಿಂದ ಬಳಲಿದ ರಾಮ ಲಕ್ಷ್ಮಣರು ಪಂಪಾ ಸರೋವರವನ್ನು ತಲುಪಿದರು. ಪರ್ವತದ ಇಳಿಜಾರಿನ ಮೇಲಿದ್ದ ಸುಗ್ರೀವನೂ ಅವನ ಗೆಳೆಯರೂ ಅವರನ್ನು ಕಂಡರು.

"ನೋಡಿ ಅಲ್ಲಿ," ಭಯದಿಂದ ಗಟ್ಟಿಯಾಗಿ ಕೂಗಿದ ಸುಗ್ರೀವ. "ನನ್ನನ್ನು ನನ್ನ ತಂದೆಯ ರಾಜ್ಯದಿಂದ ಅಟ್ಟಿದುದು ಸಾಲದು ಎಂದು ವಾಲಿ ನನ್ನನ್ನು ನಾಶ ಮಾಡುವುದಕ್ಕೆ ಗೂಢಚಾರರನ್ನೂ ಕಳುಹಿಸಿದ್ದಾನೆ! ಇಲ್ಲಿಂದ ನಾವು ಹೊರಟು ಹೋಗೋಣ."

ಅವನ ಗೆಳೆಯರಲ್ಲಿ ಮುಖ್ಯನಾದ ಹನುಮಂತ ಹೇಳಿದ, "ಬೇಡ, ಪ್ರಭೂ, ನಾನು ಭಿಕ್ಷುಕನ ವೇಷದಲ್ಲಿ ಹೋಗಿ ಅವರು ಯಾರು ಎಂದು ತಿಳಿದುಕೊಂಡು ಬರುತ್ತೇನೆ, ಅಪ್ಪಣೆ ಕೊಡಿ. ಅವರು ವಾಲಿಯ ಪ್ರಜೆಗಳಂತೆ ಕಾಣುವುದಿಲ್ಲ." ಹನುಮಂತನು ರಾಮ ಲಕ್ಷ್ಮಣರ ಬಳಿಗೆ ಹೋಗಿ ಭಿಕ್ಷೆ ಬೇಡಿದ, "ಕಷ್ಟದಲ್ಲಿದ್ದೇನೆ, ಸಹಾಯ ಮಾಡಿ" ಎಂದ.

ರಾಮನು ವಿಷಾದದಿಂದ ಹೇಳಿದ, "ಅಪ್ಪಾ, ನಮಗೇ ಸಹಾಯ ಅಗತ್ಯವಾಗಿದೆ. ನಿನಗೆ ಋಷ್ಯಮೂಕದಲ್ಲಿರುವ ಸುಗ್ರೀವನ ಪರಿಚಯ ಉಂಟೇನು? ನಮಗೆ ಅವನ ನೆರವು ಬೇಕು."

"ನೀವು ಯಾರು?" ಹನುಮಂತ ಪ್ರಶ್ನಿಸಿದ.

"ನಾವು ರಾಮ ಲಕ್ಷ್ಮಣರು," ಲಕ್ಷ್ಮಣ ಉತ್ತರ ಹೇಳಿದ. "ಅಯೋಧ್ಯೆಯ ರಾಜನಾಗಿದ್ದ ದಶರಥನ ಮಕ್ಕಳು, ದೇಶ ಬಿಟ್ಟು ಬಂದವರು, ಲಂಕೆಯ ರಾಜ ರಾವಣನು ರಾಮನ ಹೆಂಡತಿ ಸೀತೆಯನ್ನು ಕದ್ದುಕೊಂಡು ಹೋಗಿದ್ದಾನೆ, ನಾವು ಅವಳನ್ನು ಹುಡುಕುತ್ತಿದ್ದೇವೆ. ಅವಳನ್ನು ರಕ್ಷಿಸಲು ನಮಗೆ ಸುಗ್ರೀವನ ನೆರವು ಬೇಕು."

ವಿವೇಕಶಾಲಿಯಾದ ಹನುಮಂತನು, "ಸಹಾಯವನ್ನು ಬಯಸುವವರು ಸಹಾಯ ಮಾಡಲು ಸಿದ್ಧರಾಗಿರುತ್ತಾರೆ," ಎಂದುಕೊಂಡ. ಅವರನ್ನು ಸುಗ್ರೀವನ ಬಳಿಗೆ ಕರೆದೊಯ್ದು ಅವರು ಯಾರು ಎಂದು ತಿಳಿಸಿದ.

ಅವರ ದುಃಖದ ಕಥೆಯನ್ನು ಕೇಳಿ ಸುಗ್ರೀವನು, "ರಾವಣನು ಸೀತೆಯನ್ನು ಎತ್ತಿಕೊಂಡು ಹೋಗುತ್ತಿದ್ದುದನ್ನು ನಾವೇ ಕಂಡೆವೆಂದು ಕಾಣುತ್ತದೆ. ಆಕೆ ತಪ್ಪಿಸಿಕೊಳ್ಳಲು ಹೆಣಗುತ್ತಿದ್ದಳು. ಅವಳ ಕೈಯಲ್ಲಿ ಒಂದು ಗಂಟು ಇತ್ತು, ಅದರಿಂದ ತನ್ನ ಕೆಲವು ಒಡವೆಗಳನ್ನು ಕೆಳಕ್ಕೆ ಎಸೆದಳು. ನಾವು ಕೆಲವನ್ನು ಎತ್ತಿಟ್ಟುಕೊಂಡೆವು. ನಿಮಗೆ ಅವುಗಳ ಗುರುತು ಸಿಕ್ಕಬಹುದು" ಎಂದ.

ಸುಗ್ರೀವನು ತಂದ ಆಭರಣಗಳನ್ನು ಕಂಡು ಅವು ಸೀತೆಯವೇ ಎಂದು ರಾಮನಿಗೆ ಗುರುತು ಸಿಕ್ಕಾಗ, ಅವನು ಸಂಕಟದಿಂದ, "ಓ ಸೀತಾ, ನನ್ನ ಪ್ರೀತಿಯ ಪತ್ನಿ, ನಿನಗೆ ನನ್ನ ಸಹಾಯ ತುಂಬ ಆಗತ್ಯವಾಗಿದ್ದಾಗಲೇ ನಾನು ನಿನ್ನನ್ನು ರಕ್ಷಿಸಲಾರದೆ ಹೋದೆ," ಎಂದು ಅತ್ತನು.

ಸುಗ್ರೀವನು, "ಮಿತ್ರ, ದುಃಖಪಡಬೇಡ. ನಾನು ರಾವಣನನ್ನು ನಾಶ ಮಾಡುತ್ತೇನೆ. ಸೀತೆಯನ್ನು ಹಿಂದಕ್ಕೆ ಕರೆತರಲು ನಿನಗೆ ಸಹಾಯ ಮಾಡುತ್ತೇನೆ," ಎಂದು ಅವನನ್ನು ಸಮಾಧಾನ ಮಾಡಿದ.



ಸುಗ್ರೀವನು ತನ್ನ ಕಥೆಯನ್ನು ಹೇಳಿಕೊಂಡ, ವಾಲಿಯನ್ನು ಸೋಲಿಸಿ ಸಿಂಹಾಸನವನ್ನು ಮತ್ತೆ ಪಡೆಯಲು ಸಹಾಯ ಮಾಡಬೇಕೆಂದು ರಾಮನನ್ನು ಪ್ರಾರ್ಥಿಸಿದ. ಅವನಿಗೆ ಬೆಂಬಲವಾಗಿ ನಿಂತು ಸಹಾಯ ಮಾಡುವೆನೆಂದು ರಾಮನು ಸುಗ್ರೀವನಿಗೆ ಭರವಸೆ ನೀಡಿದ.

ಆದರೆ ಸುಗ್ರೀವನಿಗೆ ಮನಸ್ಸಿನಲ್ಲಿ ಶಂಕೆಯೇ. "ವಾಲಿಯನ್ನು ನಾಶ ಮಾಡುವುದು ನೀನು ಎಂದುಕೊಂಡಿರುವಷ್ಟು ಸುಲಭವಲ್ಲ. ಅವನು ಅತಿ ಬಲಿಷ್ಠರಿಗಿಂತ ಬಲಿಷ್ಠ !"

ರಾಮನು ನಕ್ಕುಬಿಟ್ಟ. ತನ್ನ ಶಕ್ತಿಯನ್ನು ತೋರಿಸಲು ಅಲ್ಲಿ ಬಿದ್ದಿದ್ದ ವಿಕಾರ ಪ್ರಾಣಿ ದುಂದುಭಿಯ ಹೆಣವನ್ನು ಕಾಲಿನಿಂದ ಒದ್ದ, ಅದು ಬಹು ದೂರ ಹೋಗಿ ಬಿದ್ದಿತು. ದೂರದಲ್ಲಿ ಬೆಟ್ಟದಂತೆ ಕಾಣುತ್ತಿತ್ತು. ಅನಂತರ ರಾಮನು ಬಿಲ್ಲನ್ನು ಎತ್ತಿ ಬಾಣವನ್ನು ಬಿಟ್ಟನು. ಬಾಣವು ಒಂದೇ ಪಂಕ್ತಿಯಲ್ಲಿದ್ದ ಏಳು ಸಾಲವೃಕ್ಷಗಳನ್ನು ಭೇದಿಸಿಕೊಂಡು ಹೋಯಿತು. ಈಗ ಸುಗ್ರೀವನಿಗೆ ವಿಶ್ವಾಸ ಬಂದಿತು, ವಾಲಿಯನ್ನು ನಾಶಗೊಳಿಸುವ ಯೋಜನೆಗಳನ್ನು ಅವರು ಆಲೋಚಿಸಿದರು.

ರಾಮನು ಹೇಳಿದ, "ಕಿಷ್ಕಿಂಧೆಯನ್ನು ಯಾರು ಆಳಬೇಕು ಎಂದು ತೀರ್ಮಾನಿಸುವ ಒಂದೇ ರೀತಿ ಎಂದರೆ ನಿನ್ನ ಅಣ್ಣ ವಾಲಿಯನ್ನು ದ್ವಂದ್ವಯುದ್ಧಕ್ಕೆ ಬಾ ಎಂದು ನೀನು ಕರೆಯುವುದು."



ಸುಗ್ರೀವನಿಗೆ ಗಾಬರಿಯಿಂದ ಮುಖ ಬಿಳಿಚಿಕೊಂಡಿತು. ತೊದಲುತ್ತ ಹೇಳಿದ, ವಾಲಿಗೆ ನಾನು ಸಾಟಿಯಲ್ಲ ಎಂದು ನಿನಗೆ ಸ್ಪಷ್ಟವಾಯಿತು ಎಂದುಕೊಂಡಿದ್ದೆ."

"ನನಗೆ ಅದು ಗೊತ್ತು. ಆದರೆ ನಿನ್ನ ಪ್ರಾಣಕ್ಕೆ ಅಪಾಯವಾದರೆ ನಿನಗೆ ಸಹಾಯ ಮಾಡಲು ನಾನು ಅಲ್ಲಿಯೇ ಇರುತ್ತೇನೆ," ಎಂದ ರಾಮ.

ಅವರೆಲ್ಲ ಕಿಷ್ಕಿಂಧೆಗೆ ಹೋದರು. ರಾಮ ಲಕ್ಷ್ಮಣ ಮತ್ತು ಹನುಮಂತ ಬಚ್ಚಿಟ್ಟುಕೊಂಡರು, ಸುಗ್ರೀವ ಮುಂದಕ್ಕೆ ಹೊರಟ.

ಸಹಾಯ ಹತ್ತಿರದಲ್ಲಿಯೆ ಇದೆ ಎಂದು ಸುಗ್ರೀವನಿಗೆ ತಿಳಿದಿತ್ತು. ಆದುದರಿಂದ ಅವನು ಬಹು ಧೈರ್ಯಶಾಲಿ



ಯಾದ. "ಹೋ ಅಣ್ಣಾ ! ಧೈರ್ಯವಿದ್ದರೆ ಹೊರಕ್ಕೆ ಬಂದು ನನ್ನ ಜೊತೆಗೆ ಯುದ್ಧ ಮಾಡು. ಹೆಚ್ಚು ಶಕ್ತಿ ಇರುವವನು ಗೆಲ್ಲಲಿ" ಎಂದು ಕೂಗಿದ.

ಈ ಮಾತುಗಳನ್ನು ಕೇಳಿ ವಾಲಿಯು, "ಹಿಂದಕ್ಕೆ ಬರುವಷ್ಟು ಧೈರ್ಯ ಬಂದಿದೆಯೇನು ನಿನಗೆ? ಒಳ್ಳೆಯದು. ಬಾ ಹಾಗಾದರೆ" ಎಂದು ಅಬ್ಬರಿಸುತ್ತ ಮುಂದಕ್ಕೆ ನುಗ್ಗಿದನು.

ವಾಲಿ ಸುಗ್ರೀವನತ್ತ ಹಾರಿದ; ಭಯಂಕರ ಕಾಳಗದಲ್ಲಿ ಒಬ್ಬರನ್ನೊಬ್ಬರು ಬಂಧಿಸಿದರು. ಸ್ವಲ್ಪ ಹೊತ್ತಿನಲ್ಲಿ ಇಬ್ಬರಲ್ಲಿ ಒಬ್ಬನು ಸೋಲುತ್ತಿರುವುದು ಸ್ಪಷ್ಟವಾಯಿತು. ಆದರೆ ದುರದೃಷ್ಟ. ಅವರಿಬ್ಬರೂ ಒಂದೇ ರೀತಿ ಕಾಣುತ್ತಿದ್ದರು; ಅವರಲ್ಲಿ ಸುಗ್ರೀವನು ಯಾರು ಎಂದು ಗುರುತಿಸಲು ರಾಮನಿಗೆ ಸಾಧ್ಯವೇ ಆಗಲಿಲ್ಲ. ವಾಲಿಯ ಬದಲು ಸುಗ್ರೀವನನ್ನು ಕೊಂದೇನು ಎಂಬ ಭಯದಿಂದ ಬಾಣ ಬಿಡುವುದಕ್ಕೆ ಆಗಲೇ ಇಲ್ಲ. ಶೂರ ವಾಲಿಗೆ ಸುಗ್ರೀವ, ಪಾಪ, ಸಾಟಿಯೇ ಅಲ್ಲ; ಭಯದಿಂದ ಅವನು ಓಡಿಹೋದ. ವಾಲಿ ಅವನ ಬೆನ್ನಟ್ಟಲಿಲ್ಲ.

ಸುಗ್ರೀವನು, ತನಗೆ ನೆರವಾಗಲಿಲ್ಲ ಎಂದು ರಾಮನಿಗೆ ಕಠಿಣವಾದ ಮಾತುಗಳನ್ನು ಆಡಿದನು. ರಾಮ ಉತ್ತರ ಹೇಳಿದ: "ನೀವಿಬ್ಬರೂ ಒಂದೇ ರೀತಿ ಕಾಣುತ್ತೀರಿ, ಯಾರು ಯಾರು ಎಂದು ಗುರುತಿಸಲು ನನಗೆ ಸಾಧ್ಯವೇ ಆಗಲಿಲ್ಲ."

ಲಕ್ಷ್ಮಣನು ಹೂವುಗಳಿದ್ದ ಒಂದು ಬಳ್ಳಿಯನ್ನು ಸುಗ್ರೀವನ ಕೊರಳ ಸುತ್ತ ಮಾಲೆಯಾಗಿ ಹಾಕಿದನು. "ಈಗ ಹಿಂದಕ್ಕ ಹೋಗಿ ಮತ್ತೆ ವಾಲಿಗೆ ಸವಾಲು ಹಾಕು. ಈ ಬಾರಿ ನಮಗೆ ನಿನ್ನ ಗುರುತು ಸಿಕ್ಕುತ್ತದೆ."

ಇಷ್ಟವಿಲ್ಲದೆ ಸುಗ್ರೀವನು ಮುನ್ನಡೆದ, ಮತ್ತೆ ವಾಲಿಯನ್ನು ಹೊರಕ್ಕೆ ಬರುವಂತೆ ಕರೆದ. ಸುಗ್ರೀವನ ಧೈರ್ಯವನ್ನು ಕಂಡು ವಾಲಿ ನಿಬ್ಬೆರಗಾದ. ಹೊರಕ್ಕೆ ಧಾವಿಸಿ ಬಂದ, ಕ್ಷಣದಲ್ಲಿ ಸುಗ್ರೀವನನ್ನು ಕೊಂದೇಬಿಡುತ್ತಿದ್ದ. ಅಷ್ಟರಲ್ಲಿ ರಾಮನು ತನ್ನ ವಾಗ್ದಾನವನ್ನು ಸ್ಮರಿಸಿಕೊಂಡು ಒಂದು ಬಾಣದಿಂದ ವಾಲಿಯನ್ನು ಹೊಡೆದು ಉರುಳಿಸಿದ.

ಮಹಾಪುರುಷ ರಾಮನು ತನಗೆ ವಿರುದ್ಧನಾದವನಲ್ಲ ಎಂದು ವಾಲಿಗೆ ದುಃಖವಾಯಿತು. ತನ್ನ ಮಗ ಅಂಗದನನ್ನು ರಾಮನ ಆಶ್ರಯಕ್ಕೆ ಒಪ್ಪಿಸಿ ಸ್ವಲ್ಪ ಕಾಲದಲ್ಲಿಯೇ ವಾಲಿ ಪ್ರಾಣಬಿಟ್ಟ. ರಾಮನು ಸುಗ್ರೀವನನ್ನು ಸಿಂಹಾಸನದ ಮೇಲೆ ಕೂಡಿಸಿ, ಅಂಗದನನ್ನು ಯುವರಾಜನನ್ನಾಗಿ ನೇಮಿಸಿದ. ಹೀಗೆ ಕುಟುಂಬದ ದೀರ್ಘ ಕಾಲದ ಕಲಹ ಕೊನೆಗೊಂಡಿತು.

ಈ ಮಧ್ಯೆ ಮಳೆಗಾಲ ಪ್ರಾರಂಭವಾಗಿತ್ತು. ಮಳೆ ನಿಲ್ಲುವ ವರೆಗೆ ರಾಮನು ಲಂಕೆಯ ಮೇಲಿನ ದಂಡಯಾತ್ರೆಯನ್ನು ಮುಂದಕ್ಕೆ ಹಾಕಬೇಕಾಯಿತು. ಹದಿನಾಲ್ಕು ವರ್ಷಗಳ ಕಾಲ ತಾನು ಕಾಡಿನಲ್ಲಿ ವಾಸ ಮಾಡುವೆನೆಂದು ರಾಮ ಮಾತು ಕೊಟ್ಟಿದ್ದ; ಆದುದರಿಂದ ಸುಗ್ರೀವನ ಅತಿಥಿಯಾಗಿ ಕಿಷ್ಕಿಂಧೆಯಲ್ಲಿ ವಾಸ ಮಾಡಲು ಅವನು ಒಪ್ಪಲಿಲ್ಲ.

ಇದರ ಅನಂತರದ ಮಾಸಗಳನ್ನು ರಾಮ ಲಕ್ಷ್ಮಣರು ಪ್ರಸ್ರವಣದ ಬೆಟ್ಟದ ಮೇಲೆ ಕಳೆದರು. ಹನುಮಂತನು ರಾಮನ ಅತಿ ನೆಚ್ಚಿನ ಬಂಟನಾದನು. ಹೀಗೆ ದಿನಗಳು ಉರುಳಿದವು,



ಮಳೆಗಾಲ ಮುಗಿಯುತ್ತ ಬಂತು. ಆದರೆ ಸೀತೆಯನ್ನು ರಕ್ಷಿಸಲು ರಾಮನಿಗೆ ತಾನು ನೆರವಾಗುತ್ತೇನೆ ಎಂದು ಕೊಟ್ಟ ವಾಗ್ದಾನವನ್ನು ಸುಗ್ರೀವನು ಸಂಪೂರ್ಣವಾಗಿ ಮರೆತುಬಿಟ್ಟಂತೆ ಕಂಡಿತು. ತನ್ನ ರಾಜಕಾರ್ಯಗಳೆಲ್ಲ, ಸುಖ ಸಂತೋಷಗಳಲ್ಲಿ ಅವನು ಮುಳುಗಿದ್ದ. ರಾಮನಿಗೆ ಆತಂಕವಾಯಿತು, ದುಃಖವಾಯಿತು.

ಒಂದು ದಿನ ಹನುಮಂತನು ಸುಗ್ರೀವನ ಬಳಿಗೆ ಹೋಗಿ, "ಸೀತೆಯನ್ನು ರಕ್ಷಿಸುವೆನೆಂದು ನೀನು ರಾಮನಿಗೆ ಮಾತು ಕೊಡಲಿಲ್ಲವೆ? ನಿನ್ನ ಸೈನ್ಯ ಎಲ್ಲಿ ಹಾಗಾದರೆ?" ಎಂದ.

ಸೈನ್ಯವನ್ನು ಬರಮಾಡುವಂತೆ ಅಪ್ಪಣೆಯಾಯಿತು. ಮಳೆ ನಿಂತಿತು, ಆಕಾಶದಲ್ಲಿ ಮೋಡಗಳಿರಲಿಲ್ಲ, ಆದರೂ ಸುಗ್ರೀವನು ತನ್ನ ಸುಖದಲ್ಲಿಯೇ ಮೈಮರೆತಿದ್ದ. ಕಡೆಗೆ ರಾಮನ ತಾಳ್ಮೆ ಮುಗಿಯಿತು. ಲಕ್ಷ್ಮಣ ಸುಗ್ರೀವನ ಬಳಿಗೆ ಹೋದ, ಸುಗ್ರೀವನು ಹಬ್ಬದ ಸಂಭ್ರಮದಲ್ಲಿದ್ದ.

ಬಹು ಕೋಪದಿಂದ ಲಕ್ಷ್ಮಣನು ಕೇಳಿದ, "ನೀನು ಕೊಟ್ಟ ಮಾತಿನಂತೆ ನಡೆಯುವಿಯಾ? ಇಲ್ಲವೆ ರಾಮನ ಬಾಣವು ವಾಲಿಯನ್ನು ಕೊಂದಂತೆ ನಿನ್ನನ್ನೂ ಕೊಲ್ಲಬೇಕು ಎಂದು ನಿನ್ನ ಆಸೆಯೇ?"

ಸುಗ್ರೀವನಿಗೆ ಭಯವಾಯಿತು. ತನ್ನನ್ನು ಕ್ಷಮಿಸಬೇಕೆಂದು ಲಕ್ಷ್ಮಣನನ್ನು ಬೇಡಿಕೊಂಡನು. ಸೈನ್ಯಕ್ಕೆ ಕರೆ ಕಳುಹಿಸಿದೆ ಎಂದೂ ತಾನು ಬಹು ಬೇಗ ಸಿದ್ಧನಾಗುವೆನೆಂದೂ ಭರವಸೆ ಕೊಟ್ಟನು. ಸ್ವಲ್ಪ ಕಾಲದಲ್ಲಿಯೇ ಸೈನ್ಯ ಸೇರಿತು, ಸುಗ್ರೀವನು ಸೈನ್ಯದೊಡನೆ ರಾಮನ ಬಳಿಗೆ ಹೋದನು. ರಾಮನು, "ಮೊದಲು ನಿನ್ನ ದೂತರಲ್ಲಿ ಶ್ರೇಷ್ಠರಾದವರು ಕೆಲವರನ್ನು ಕಳುಹಿಸು, ಅವರು ಸೀತೆ ಎಲ್ಲಿದ್ದಾಳೆ ಎಂದು ಕಂಡುಹಿಡಿಯಲಿ. ಅನಂತರ ಸೈನ್ಯವು ಹೊರಡಬಹುದು," ಎಂದು ಹೇಳಿದನು.

ಸುಗ್ರೀವನು ತನ್ನ ಹಿಂಬಾಲಕರಲ್ಲಿ ಕೆಲವರನ್ನು ಆರಿಸಿ, ಅವರ ಗುಂಪಿಗೆ ಅಂಗದನನ್ನೂ ಹನುಮಂತನನ್ನೂ ನಾಯಕರನ್ನಾಗಿ ನೇಮಿಸಿದನು. ಅವರಲ್ಲೆಲ್ಲ ಶ್ರೇಷ್ಠನಾದವನು, ನೆಚ್ಚಿಕೆಗೆ ಅರ್ಹನಾದವನು ಹನುಮಂತ. ಆದುದರಿಂದ ರಾಮನು ಅವನನ್ನು ಕರೆದು ಹೇಳಿದನು,

# ಲಂಕೆಗೆ ಹನುಮಂತ

ಹನುಮಂತ, ಅಂಗದ ಮತ್ತು ಅವರ ಸಣ್ಣ ಗುಂಪಿನವರು ಕಿಷ್ಕಿಂಧೆಯನ್ನು ಬಿಟ್ಟು ದಕ್ಷಿಣಕ್ಕೆ ಪ್ರಯಾಣ ಮಾಡಿದರು. ಅವರು ಎಲ್ಲೆಲ್ಲಿಯೂ ಸೀತೆಗಾಗಿ ಹುಡುಕಿದರು. ಸಾಧ್ಯವಾದಷ್ಟೂ ಅಲ್ಲಿಷ್ಟು ಇಲ್ಲಿಷ್ಟು ವಿಷಯವನ್ನು ಸಂಗ್ರಹಿಸಿದರು. ಕಡೆಗೆ ಭೂಮಿಯ ದಕ್ಷಿಣದ ತುಟ್ಟ ತುದಿಗೆ ಬಂದರು. ಅವರ ಮುಂದೆ ಪ್ರಕ್ಷುಬ್ಧ ಸಾಗರ ಚಾಚಿತ್ತು, ಅದರಾಚೆ ಲಂಕಾದ್ವೀಪವಿತ್ತು.

ಅವರು ಬಳಲಿದ್ದರು, ಧೈರ್ಯಗೆಟ್ಟಿದ್ದರು. ಆದರೆ ಅಂಗದ ಉದ್ವೇಗದಿಂದ ನುಡಿದ, "ಸೀತೆಯ ಸುದ್ದಿ ಇಲ್ಲದೆ ನಾನಂತೂ ಹಿಂದಕ್ಕೆ ಹೋಗಲಾರೆ. ಅದಕ್ಕಿಂತ ಇಲ್ಲೇ ಕುಳಿತು ಉಪವಾಸ ಮಾಡಿ ಸಾಯುವುದು ಉತ್ತಮ. ರಾಮನ ಸೇವೆಯಲ್ಲಿ ಜಟಾಯು ಪ್ರಾಣ ಬಿಟ್ಟ. ನಾವೂ ಹಾಗೆಯೇ ಮಾಡಬಹುದು. ಅಷ್ಟೇ ಅಲ್ಲ, ಸೀತೆಯ ಸಮಾಚಾರವಿಲ್ಲದೆ ನಾವು ಹಿಂದಕ್ಕೆ ಹೋದರೆ ನನ್ನ ಚಿಕ್ಕಪ್ಪ ಸುಗ್ರೀವ ನಮ್ಮನ್ನು ಕೊಂದೇಬಿಡುತ್ತಾನೆ."



ಅವರ ಅದೃಷ್ಟ, ಅವರ ಹಿಂದೆ ಒಂದು ಬೆಟ್ಟದ ಮೇಲೆ ಜಟಾಯುವಿನ ಸೋದರ ಸಂಪಾತಿ ಕುಳಿತ್ತಿದ್ದ. ಅಂಗದನ ಮಾತುಗಳು ಅವನಿಗೆ ಕೇಳಿಸಿದವು. ಅವನು ಕೂಡಲೇ ಕೆಳಕ್ಕೆ ಹಾರಿ ಬಂದ. "ನೀವು ಯಾರು?" ಅವನು ಪ್ರಶ್ನಿಸಿದ. "ಜಟಾಯುವಿನ ಸಾವಿನ ವಿಷಯ ನಿಮಗೆ ಏನು ಗೊತ್ತು? ನಾನು ಅವನ ಸೋದರ."

ಇಡೀ ದುಃಖದ ಕಥೆಯನ್ನು ಅವರು ಅವನಿಗೆ ಹೇಳಿದರು. ತಾವು ಸೀತೆಯನ್ನು ಹುಡುಕಲು ಬಂದು ಇನ್ನೂ ವಿಫಲರಾಗಿರುವುದನ್ನೂ ಹೇಳಿದರು.

ಸಂಪಾತಿ ಹೇಳಿದ, "ಆಕೆ ಎಲ್ಲಿದ್ದಾಳೆ ಎಂದು ನನಗೆ ಗೊತ್ತು. ಸಮುದ್ರದ ಮೇಲೆ ಆಕೆಯನ್ನು ರಾವಣನು ಎತ್ತಿಕೊಂಡು

ಹೋಗುತ್ತಿದ್ದುದನ್ನು ನಾನು ಕಂಡೆ. ಅವಳನ್ನು ಲಂಕೆಯಲ್ಲಿ ನೀವು ನೋಡುವಿರಿ." ಅಂಗದ ಹನುಮಂತ ಮತ್ತು ಇತರರಿಗೆ ಈ ಮಾತುಗಳನ್ನು ಕೇಳಿ, ಕೃತಜ್ಞತೆ ತುಂಬಿ ಬಂದಿತು. "ನೀವು ಸಮುದ್ರವನ್ನು ದಾಟಬೇಕು, ಅಷ್ಟೆ," ಎಂದ ಸಂಪಾತಿ. ಅವರೆಲ್ಲ ಬೆಚ್ಚಿ ಬಿದ್ದರು. ಸಮುದ್ರವನ್ನು ದಾಟುವುದು! ಹೇಗೆ? ಯಾರು ಮಾಡಬೇಕು ಆ ಕೆಲಸ ವನ್ನು?

ಅವರಿಗೆ ಬುದ್ಧಿವಾದ ಹೇಳುವ ವೃದ್ಧ ಜ್ಞಾನಿ ಜಾಂಬವಂತ ಹೇಳಿದ, "ಹನುಮಂತನೇ ಹೋಗಬೇಕು. ಅಷ್ಟು ದೂರ ಹಾರಬಲ್ಲವನು ಅವನೊಬ್ಬನೇ."

ಹನುಮಂತನು ಎದ್ದು ನಿಂತು ಸುತ್ತಲೂ ನೋಡಿದ. ಹಾರುವುದಕ್ಕೆ ನಿಂತುಕೊಳ್ಳಲು ಅವನಿಗೆ ಸರಿಯಾದ ಸ್ಥಳ ಬೇಕಾಗಿತ್ತು. ಸುಂದರವಾದ ಮಹೇಂದ್ರ ಪರ್ವತ ಬಳಿಯಲ್ಲಿ ಇದ್ದಿತು. ಪಕ್ಷಿ, ಮೃಗಗಳ ತವರು ಅದು. ಅದರ ಇಳಿಜಾರಿನಲ್ಲಿ ಎಲೆಗಳು ತುಂಬಿದ ಎತ್ತರ ವಾದ ಮರಗಳು ಬೆಳೆದಿದ್ದವು.

ಹನುಮಂತನು ಸರಸರನೆ ಅದರ ತುದಿಯನ್ನು ಏರಿದ. ಬಂಡೆಗಲ್ಲಿನ ಅದರ ಶಿಖರವೇ ಅವನಿಗೆ ಬೇಕಾಗಿದ್ದದ್ದು. ತನ್ನ ಸಂಪೂರ್ಣ ಎತ್ತರಕ್ಕೆ ಮೈ ಚಾಚಿಕೊಂಡು ಗಟ್ಟಿಯಾದ ನೆಲದ ಮೇಲೆ ಪಾದಗಳನ್ನು ಊರಿ ನಿಂತ, ಕೈಗಳನ್ನು ಎರಡು ಕಡೆಗಳಲ್ಲೂ ನೆಲಕ್ಕೆ ಒತ್ತಿ ಶಕ್ತಿಯನ್ನು ಸೇರಿಸಿದ. ಹೀಗೆ ತನ್ನ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಅವನು ಮೇಲಕ್ಕೆ ಹಾರಿದ. ವೇಗಕ್ಕೆ ಎತ್ತರವಾಗಿ ಆಕಾಶದಲ್ಲಿ ಏರಿ ಸಾಗರದ ಮೇಲೆ ಚಿಮ್ಮಿದ.

ಹನುಮಂತ ಹಾರಿದ ರಭಸಕ್ಕೆ ಮಹೇಂದ್ರ ಪರ್ವತ ನಡುಗಿತು. ಅದರ ಇಳಿಜಾರು ಗಳಲ್ಲಿ ಬಿರುಕುಗಳು ಕಾಣಿಸಿಕೊಂಡುವು. ಇವುಗಳಿಂದ ನೀರಿನ ಬುಗ್ಗೆಗಳು ಚಿಮ್ಮಿದವು. ಮರಗಳು ಬುಡ ಮೇಲಾಗಿ ಉರುಳಿದವು, ಪಕ್ಷಿಗಳು ಮರಗಳನ್ನು ಬಿಟ್ಟು ಹಾರಿದವು. ಭಯದಿಂದ ಪ್ರಾಣಿಗಳು ಚೆಲ್ಲಾಪಿಲ್ಲಿಯಾಗಿ ಓಡಿದವು.

ಕಡೆಗೆ ಹನುಮಂತ ಲಂಕಾದ್ವೀಪದಲ್ಲಿಳಿದ. ಸ್ವಲ್ಪ ದೂರದಲ್ಲಿಯೇ ರಾವಣನ ರಾಜಧಾನಿ ಚಿನ್ನದ ನಗರ ಲಂಕೆ. ಅದರ ಸುತ್ತ ಆಳವಾದ ಕಂದರ, ನೂರಾರು ಮಂದಿ ಯೋಧರು ಕಾವಲಿದ್ದಾರೆ. ರಾತ್ರಿಯಾಗಿ ಜನರು ಮನೆಗಳನ್ನು ಸೇರುವ ವರೆಗೆ ಕಣ್ಣುತಪ್ಪಿಸಿಕೊಂಡಿರು ವುದು ಎಂದು ಹನುಮಂತ ನಿಶ್ಚಯಿಸಿದ. ಕತ್ತಲಾದ ನಂತರ ಗೋಡೆಯ ಮೇಲೆ ಹಾರಿ, ನಿಶ್ಶಬ್ದವಾಗಿ ರಾಕ್ಷಸರ ಕಣ್ಣಿಗೆ ಕಾಣದಂತೆ, ಅಂಬೆಗಾಲಿಡುತ್ತ ಅವನು ಮುಂದಕ್ಕೆ ತೆವಳಿದ.

ಅವನ ಮುಂದೆಯೇ ಪ್ರಸಿದ್ಧ ಲಂಕಾನಗರ! ಇಷ್ಟು ವೈಭವದ ನೋಟವನ್ನು ಹನು ಮಂತ ಹಿಂದೆಂದೂ ನೋಡಿರಲಿಲ್ಲ. ಅಗಲವಾದ ರಾಜಬೀದಿಗಳು, ಅವುಗಳ ಎರಡು ಪಾರ್ಶ್ವ ಗಳಲ್ಲಿಯೂ ಸುಂದರವಾದ ಅರಮನೆಗಳು. ಸಂಗೀತ ಮತ್ತು ನರ್ತನ ಮಾಡುತ್ತಿರುವ

ಸ್ತ್ರೀಯರ ಕಾಲಂದಿಗೆಗಳ ಶಬ್ದ ಅವನಿಗೆ ಕೇಳಿಸಿತು. ಗಾಳಿ ಸೊಗಸಾದ ಪರಿಮಳಗಳಿಂದ ತುಂಬಿಹೋಗಿತ್ತು.

ನಗರದ ಮಧ್ಯೆ ಇದ್ದ ರಾವಣನ ಅರಮನೆಯನ್ನು ಸಶಸ್ತ್ರರಾದ ರಾಕ್ಷಸರು ಕಾಯುತ್ತಿದ್ದರು. ಯಾರೂ ಕಾಣದಂತೆ ಹನುಮಂತನು ಒಳಕ್ಕೆ ನುಳಿದಾಗ ಕೇವಲ ಒಂದು ಬೆಕ್ಕಿನ ಗಾತ್ರದಲ್ಲಿದ್ದ. ಆ ವೈಭವದ ಸದನದಲ್ಲಿ ಅವನು ಕೊಠಡಿಯಿಂದ ಕೊಠಡಿಗೆ ಅಲೆದಾಡಿದ. ಯಾವ ಮಿತಿ ಮೇರೆಗಳೂ ಇಲ್ಲದ ಕನಸಿನಲ್ಲಿಯೂ ಅಂತಹ ಶ್ರೀಮಂತಿಕೆಯ ಪ್ರದರ್ಶನವನ್ನು ಅವನು ಕಂಡಿರಲಿಲ್ಲ. ಸೊಗಸಾದ ರೇಶ್ಮೆಯ ವಸ್ತ್ರಗಳನ್ನು ಧರಿಸಿ ಆಭರಣಗಳ ಹೊರೆಯನ್ನೆ ಹೊತ್ತಿದ್ದ ಹೆಂಗಸರೂ ಗಂಡಸರೂ ಗಾಢನಿದ್ರೆಯಲ್ಲಿದ್ದರು. ಹನುಮಂತನು ಸ್ತ್ರೀಯರ ಅಂತಃಪುರವನ್ನು ಹೊಕ್ಕ. ಅಲ್ಲಿ ನಿದ್ರಿಸುತ್ತಿದ್ದ ಸ್ತ್ರೀಯರ ಮುಖಗಳನ್ನೆಲ್ಲ ನೋಡಿದ. ಎಲ್ಲಿಯೂ ಸೀತೆಯ ಸುಳಿವು ಕಾಣಲಿಲ್ಲ. ರಾವಣನ ಅಂತಃಪುರವನ್ನೂ ಹುಡುಕಿದ. ಬಂಗಾರ ಮತ್ತು ವಜ್ರಗಳ ಪೀಠೋಪಕರಣಗಳು ಮತ್ತು ಆಭರಣಗಳ ನಡುವೆ ಇದ್ದ ಆ ಮಹಾ ಅರಸನನ್ನೂ ಅವನ ಪತ್ನಿ ಮಂಡೋದರಿಯನ್ನೂ ನೋಡಿದ. ಆದರೆ ಸೀತೆಯ ಚಿಹ್ನೆಯೇ ಎಲ್ಲಿಯೂ ಇರಲಿಲ್ಲ.

"ಅವಳನ್ನು ಬಚ್ಚಿಡುವಂತಹ ಬೇರೆ ಸ್ಥಳಗಳಿರಬೇಕು," ಎಂದುಕೊಂಡ ಹನುಮಂತ.

ಅರಮನೆಯಾಚೆ ಸ್ವಲ್ಪ ದೂರದಲ್ಲಿ ರಾವಣನ ಅಶೋಕವನವಿತ್ತು. ಅದರ ಸುತ್ತ ಇದ್ದ ಗೋಡೆಯನ್ನು ಹಾರಿದ ಹನುಮಂತ, ತಾನೊಂದು ಬಹು ಸುಂದರ ಉದ್ಯಾನದಲ್ಲಿದ್ದುದನ್ನು ಕಂಡ. ಚಂದ್ರೋದಯವಾಗಿತ್ತು. ಹತ್ತಿರ ನೆಲದ ಮೇಲೆ ಕುಳಿತ್ತಿದ್ದ ಸುಂದರಿಯೊಬ್ಬಳು ಬೆಳುದಿಂಗಳಿನಲ್ಲಿ ಕಾಣಿಸಿದಳು. ಅವಳ ಬಟ್ಟೆಗಳು ಮುದುರಿದ್ದವು. ಮುಖ ಕೃಶವಾಗಿತ್ತು, ಬಿಳಿಚಿಕೊಂಡಿತ್ತು. ಅವಳನ್ನು ರಾಕ್ಷಸಿಯರು ಸುತ್ತುವರೆದಿದ್ದರು.

ಹನುಮಂತನು, "ಇವಳೇ ಸೀತೆ. ಇನ್ನು ನಾನು ಹಿಂದಕ್ಕೆ ಹೋಗಬಹುದು. ಆದರೆ ಈ ಕರಾಳ ರೂಪದ ರಾಕ್ಷಸಿಯರೆಲ್ಲ ಅವಳ ಸುತ್ತ ಇರುವಾಗ ನಾನು ಅವಳೊಡನೆ ಮಾತನಾಡುವುದು ಹೇಗೆ? ನಾನು ಅವಳೊಡನೆ ಮಾತನಾಡದೆ ಹೋದರೆ ರಾಮನಿಗೆ ಏನು ಹೇಳಲಿ? ನಾನು ಅವಳಿಗೆ ಏನೂ ಹೇಳದೆ, ಅವಳು ಉಂಗುರವನ್ನು ನೋಡಿದಾಗ ಏನೆಂದಳು ಎಂದು ರಾಮನು ಕೇಳಿಯೇ ಕೇಳುತ್ತಾನೆ. ಅಲ್ಲದೆ ಅವಳಿಂದ ಗುರುತಾಗಿ ಏನನ್ನಾದರೂ ನಾನು ತೆಗೆದುಕೊಂಡು ಹೋಗದಿದ್ದರೆ ನನ್ನ ಮಾತನ್ನು ಯಾರಾದರೂ ನಂಬುವರೇ?" ಎಂದು ಯೋಚಿಸಿದನು.

ಅಷ್ಟು ಹೊತ್ತಿಗೆ ಪಂಜಿನ ಮೆರವಣಿಗೆಯಲ್ಲಿ ಬರುತ್ತಿದ್ದ ರಾವಣನನ್ನು ಹನುಮಂತನು ಕಂಡನು. ರಾವಣನು ಸೀತೆಯ ಬಳಿಗೆ ಬಂದು ಹೇಳಿದ, "ಸೀತೆ, ನನ್ನ ರಾಣಿಯಾಗು, ರಾಮ

ನಿನಗಾಗಿ ಇಲ್ಲಿಗೆ ಎಂದಿಗೂ ಬರುವುದಿಲ್ಲ." ಸೀತೆ ತಿರಸ್ಕಾರದಿಂದ ಅವನತ್ತ ಬೆನ್ನು ಮಾಡಿದಳು. ರಾವಣ ಕೋಪದಿಂದ ಹುಚ್ಚಾದ. "ನಾನು ನಿನಗೆ ಕೊಟ್ಟಿರುವ ವರ್ಷದ ಅವಧಿಯಲ್ಲಿ ಎರಡೇ ತಿಂಗಳು ಉಳಿದಿದೆ." ಗಟ್ಟಿಯಾಗಿ ಹೇಳಿದ, "ಅದು ಕಳೆದರೆ ನಾನು ಬಲಾತ್ಕಾರವಾಗಿ ನಿನ್ನನ್ನು ನನ್ನ ಅರಮನೆಗೆ ಕರೆದುಕೊಂಡು ಹೋಗುತ್ತೇನೆ, ನನ್ನ ಅಡಿಗೆಯವರು ನನ್ನ ಉಪಾಹಾರಕ್ಕೆ ನಿನ್ನನ್ನು ತುಂಡು ತುಂಡು ಮಾಡುತ್ತಾರೆ."

ರಾವಣನು ಹೋದ ನಂತರ ರಾಕ್ಷಸಿಯರು ಸೀತೆಯನ್ನು ಸುತ್ತುವರೆದರು. ಅವಳು ಮನಸ್ಸನ್ನು ಬದಲಾಯಿಸುವಂತೆ ಮಾಡಲು ಅವರು ಬಹಳ ಶ್ರಮಪಟ್ಟರು. "ಎಂತಹ ಮೂರ್ಖಳು ನೀನು ! ನಿನ್ನ ರಾಮ ಒಬ್ಬ ಭಿಕ್ಷುಕ ! ಅವನು ಲಂಕೆಗೆ ಹೇಗೆ ಬಂದಾನು? ರಾವಣನಂತಹ ಮಹಾಪುರುಷನು ನೀನು ಅವನ ಹೆಂಡತಿಯಾಗಬೇಕೆಂದು ಅಪೇಕ್ಷಿಪಡುತ್ತಾನೆ ಎನ್ನುವುದೇ ನಿನ್ನ ಅದೃಷ್ಟ. ಅವನನ್ನು ತಿರಸ್ಕರಿಸುವುದಕ್ಕೆ ನಿನಗೆ ಎಷ್ಟು ಧೈರ್ಯ !"

ಆದರೆ ಸೀತೆ ಕೋಪದಿಂದ ಪ್ರತಿಯಾಗಿ ಉತ್ತರ ಕೊಟ್ಟಳು, "ನಾನು ನನ್ನ ಮನಸ್ಸನ್ನು ಬದಲಾಯಿಸುವುದೇ ಇಲ್ಲ. ನೀವು ನನ್ನನ್ನು ನಿಮ್ಮ ಇಷ್ಟ ಬಂದಂತೆ ಮಾಡಬಹುದು."

ಕಡೆಗೆ ಅವರು ಅಲ್ಲಿಂದ ಹೊರಟು ಹೋದರು, ಸೀತೆ ಒಬ್ಬಳೇ ಅಳುತ್ತ ಕುಳಿತಳು. ತಾನು ಕೆಳಕ್ಕೆ ಇಳಿದು ಅವಳೊಡನೆ ಮಾತನಾಡಲು ಇದೇ ಸರಿಯಾದ ಸಮಯ ಎನ್ನಿಸಿತು ಹನುಮಂತನಿಗೆ. ಆದರೆ ಸೀತೆ ಅವನನ್ನು ನೋಡಿಯೇ ಇರಲಿಲ್ಲ. ಆದುದರಿಂದ ಅವಳು ಹೆದರಿಕೊಳ್ಳಬಹುದು. ಹೀಗೆಂದುಕೊಂಡು ಅವನು ಮರದ ಮೇಲೆ ಕುಳಿತೇ ಮೆಲುಧನಿಯಲ್ಲಿ ರಾಮನನ್ನು ಹೊಗಳಲು ಆರಂಭಿಸಿದನು.

ಆಶ್ಚರ್ಯದಿಂದ ಸೀತೆ ತಲೆ ಎತ್ತಿ ನೋಡಿದಳು. "ನೀನು ಯಾರು?" ಎಂದು ಮೆಲುದನಿಯಲ್ಲಿ ಕೇಳಿದಳು.

ಹನುಮಂತನು ಕೆಳಗಿಳಿದು ಬಂದು ಸೀತೆಯ ಪಾದಗಳನ್ನು ಮುಟ್ಟಿದನು, ರಾಮನ ಉಂಗುರವನ್ನು ಕೊಟ್ಟನು. "ತಾಯಿ ಸೀತಾದೇವಿ, ಧೈರ್ಯ ತಂದುಕೊ. ನಿನ್ನನ್ನು ರಕ್ಷಿಸಲು ಅವನು ಸ್ವಲ್ಪ ಕಾಲದಲ್ಲಿಯೆ ಬರುವನು. ನಾನು ಅವನ ಸೇವಕ. ನಿನ್ನ ಸಮಾಚಾರ ತಿಳಿಯಲು ನಾನು ಬಂದಿದ್ದೇನೆ," ಎಂದು ಹೇಳಿದ.

ತನ್ನ ಪ್ರಿಯ ಪ್ರಭುವನ್ನು ಕುರಿತು ಅವಳು ಹನುಮಂತನನ್ನು ನೂರು ಪ್ರಶ್ನೆಗಳನ್ನು ಕೇಳಿದಳು. ಆದರೆ ಶಕ್ತ ಹನುಮಂತನ ಬೆನ್ನಿನ ಮೇಲೆ ಕುಳಿತು ಸಾಗರವನ್ನು ದಾಟಲು ಒಪ್ಪಲಿಲ್ಲ. "ಇಲ್ಲ, ಮಗೂ, ಆಗದು; ನೀನು ಸಿಕ್ಕಿಬಿದ್ದರೆ, ನಾನು ಎಲ್ಲಿದ್ದೇನೆ ಎಂದು ನನ್ನ ಪ್ರಭುವಿಗೆ

ತಿಳಿಸುವವರೇ ಇಲ್ಲದಂತಾಗುತ್ತದೆ. ಈ ನನ್ನ ಚೂಡಾಮಣಿಯನ್ನು ತೆಗೆದುಕೊಂಡು ಹೋಗು, ಅವನು ಒಂದು ತಿಂಗಳಿನಲ್ಲಿ ಬಾರದಿದ್ದರೆ ನಾನು ಸಾಯುತ್ತೇನೆ ಎಂದು ತಿಳಿಸು."

ಹನುಮಂತನು, "ನಿರಾಸೆ ಪಡಬೇಡಿ ತಾಯಿ, ಆತನು ಬಂದೇ ಬರುತ್ತಾನೆ" ಎಂದು ಉತ್ತರಿಸಿದ. ಅನಂತರ ಹನುಮಂತನು ತಾನು ಬಂದ ಮಾರ್ಗದಲ್ಲಿಯೆ ಹಿಂದಿರುಗಿದ.

ಇಷ್ಟು ಕಾಲವೂ ಅಂಗದ, ಜಾಂಬವಂತ ಮತ್ತಿತರ ವಾನರರು ಸಮುದ್ರದ ಇನ್ನೊಂದು ತೀರದಲ್ಲಿ ಭಯ, ಆತಂಕಗಳಿಂದ ಆಕಾಶವನ್ನೆ ದಿಟ್ಟಿಸುತ್ತ ಕಾಯುತ್ತಿದ್ದರು.

ಅಲೆಗಳ ಮೇಲೆ ಹಾರಿ ಬಂದ ಹನುಮಂತ. "ನಾನು ಸೀತಾಮಾತೆಯನ್ನು ನೋಡಿದೆ. ಅವಳೊಂದಿಗೆ ಮಾತನಾಡಿದೆ! ಇನ್ನು ಕಾಲವನ್ನು ವ್ಯರ್ಥ ಮಾಡಬಾರದು. ಕ್ಷಿಪ್ರವಾಗಿ ರಾಮನ ಬಳಿಗೆ ಹಿಂದಿರುಗೋಣ," ಎಂದ.

ಅವರೆಲ್ಲ ಮರುಪ್ರಯಾಣವನ್ನು ಪ್ರಾರಂಭಿಸಿದರು. ತಮಗೆ ಅಡ್ಡವಾಗಿ ಬಂದ ನದಿಗಳ ಮೇಲೆ ಹಾರಿದರು, ಹೊಳೆಗಳನ್ನು ದಾಟಿದರು. ಬೆಟ್ಟಗಳನ್ನು ಹತ್ತಿದರು, ಮರದ ರೆಂಬೆಗಳನ್ನು ಮುರಿದು ಹಾಕಿದರು. ಕಡೆಗೆ ಅವರು ಕಿಷ್ಕಿಂಧೆಯನ್ನು ತಲಪಿದರು. ರಾಮ ಲಕ್ಷ್ಮಣರಿಗಂತೂ ಹನುಮಂತನು ಮಾತನಾಡುವ ವರೆಗೆ ಸಹ ಕಾಯುವಷ್ಟು ತಾಳ್ಮೆಯಿಲ್ಲ.

ರಾಮನ ಪದತಲದಲ್ಲಿ ಕುಳಿತು ಹನುಮಂತನು ಸೀತೆಯ ಒಡವೆಯನ್ನು ಅರ್ಪಿಸಿದನು. "ಪ್ರಭೂ, ನಾನು ಆಕೆಯನ್ನು ಕಂಡು ಮಾತನಾಡಿಸಿದ್ದೇನೆ. ಆಕೆ ಕ್ಷೇಮವಾಗಿದ್ದಾಳೆ. ಆದರೆ ಬಹು ದುಃಖಿದಲ್ಲಿದ್ದಾಳೆ. ಆಕೆ ಅಶೋಕವನದಲ್ಲಿದ್ದಾಳೆ, ಕಾವಲಿರುವ ಭಯಂಕರ ರಾಕ್ಷಸಿಯರು ಹಗಲು ರಾತ್ರಿ ಆಕೆಯನ್ನು ಗೋಳಾಡಿಸುತ್ತಾರೆ. ಒಂದು ತಿಂಗಳೊಳಗಾಗಿ ಆಕೆಯನ್ನು ರಕ್ಷಿಸಬೇಕು, ಇಲ್ಲವಾದರೆ ರಾವಣ ಆಕೆಯನ್ನು ಕೊಂದು ಬಿಡುತ್ತಾನೆ."





ಸಂತೋಷದಿಂದ ರಾಮನ ಧ್ವನಿ ಕಟ್ಟಿಹೋಯಿತು. ಅವನು. "ಧೀರ ಗೆಳೆಯ. ನಿನಗೆ ನಾನು ಬಹುಮಾನವಾಗಿ ಏನನ್ನೂ ಕೊಡಲಾರೆ." ಎನ್ನುತ್ತ ಹನುಮಂತನನ್ನು ತಬ್ಬಿ ಕೊಂಡನು.

ಒಂದು ಕ್ಷಣವನ್ನೂ ವ್ಯರ್ಥ ಮಾಡುವಂತಿರಲಿಲ್ಲ. ಸುಗ್ರೀವನ ಸೈನ್ಯ ಸಿದ್ಧವಾಗಿತ್ತು. ರಾಮನು ಹೇಳುತ್ತಲೇ ಸುಗ್ರೀವ ಅದಕ್ಕೆ ಮುನ್ನಡೆಯುವಂತೆ ಅಪ್ಪಣೆ ಮಾಡಿದ. ಸ್ವಲ್ಪ ಸಮಯದಲ್ಲಿಯೆ ಅವರು ಸಮುದ್ರ ತೀರವನ್ನು ಸೇರಿ ಮರಳಿನ ಮೇಲೆ ಬೀಡುಬಿಟ್ಟರು. ಎತ್ತರವಾದ ಪರ್ವತದ ಮೇಲೆ ವೀಕ್ಷಣಸ್ಥಾನದಲ್ಲಿದ್ದ ರಾವಣನ ಕಾವಲುಗಾರರು ಅವರ ಶಿಬಿರಗಳನ್ನು ಕಂಡು, ರಾಮನ ಸೈನ್ಯ ಬಂದಿದೆ ಎಂದು ರಾವಣನಿಗೆ ವರದಿ ಮಾಡಿದರು. ರಾವಣ ತನ್ನ ಮಂತ್ರಿಗಳನ್ನೂ ಸಲಹೆಗಾರರನ್ನೂ, ಸೈನ್ಯಾಧಿಕಾರಿಗಳನ್ನೂ ಕರೆಸಿ ಮುಂದೆ ಏನು ಮಾಡಬೇಕು ಎಂದು ಸಮಾಲೋಚಿಸಿದ. ರಾಕ್ಷಸರಿಗೆ ತಮ್ಮ ಶಕ್ತಿಯಲ್ಲಿ ವಿಶ್ವಾಸ. ಶತ್ರುವನ್ನು ನಾಶ ಮಾಡುತ್ತೇವೆ ಎಂಬ ದೃಢ ನಂಬಿಕೆ. ಅವರು ಹೇಳಿದರು, "ತಮ್ಮ ಎದುರಿಗೆ ರಾಮನು ಏನು ಮಾಡಬಲ್ಲ? ವಾನರರ ಸೈನ್ಯವನ್ನು ಸಾಲವಾಗಿ ಪಡೆದು ಬಂದಿರುವ ಭಿಕ್ಷುಕ ಅವನು. ಒಂದೇ ದಿನದಲ್ಲಿ ನಾವು ಅವರನ್ನು ಹೊಡೆದೋಡಿಸಬಹುದು."



ಆದರೆ ರಾವಣನ ತಮ್ಮ ವಿಭೀಷಣ ಹೇಳಿದ. "ವಿಷಯವನ್ನು ಇಷ್ಟು ಹಗುರವಾಗಿ ಕಾಣಬೇಡ, ಮಹಾರಾಜ. ರಾಮನಿಗೆ ನೀನು ಬಹಳ ಅನ್ಯಾಯವನ್ನು ಮಾಡಿದ್ದೀಯೆ. ನೀನು ಸೀತೆಯನ್ನು ಹಿಂದಕ್ಕೆ ಕಳುಹಿಸದೆ ಹೋದರೆ ನಿನಗೂ ನಿನ್ನ ರಾಜ್ಯಕ್ಕೂ ವಿನಾಶವೇ ಒದಗುತ್ತದೆ." ಈ ಮಾತುಗಳನ್ನು ಕೇಳಿ ರಾವಣನಿಗೆ ಬಹು ಕೋಪ ಬಂದಿತು. ಆದುದರಿಂದ ವಿಭೀಷಣನಿಗೆ ತಾನು ಲಂಕೆಯನ್ನು ಬಿಡುವುದೇ ಕ್ಷೇಮ ಎಂದು ತೋರಿತು. ನಾಲ್ವರು ಸಂಗಾತಿಗಳನ್ನು ಕರೆದುಕೊಂಡು ಅವನು ಸಮುದ್ರವನ್ನು ದಾಟಿ ರಾಮನ ಶಿಬಿರಕ್ಕೆ ಬಂದನು.

ವಿಭೀಷಣನನ್ನು ಮೊದಲು ಕಂಡವನು ಸುಗ್ರೀವ; ಅವನು "ನಮ್ಮ ಯೋಧರು ಸಿದ್ಧರಾಗಲಿ, ರಾಕ್ಷಸನೊಬ್ಬ ಬರುತ್ತಿದ್ದಾನೆ!" ಎಂದು ಕೂಗಿ ಹೇಳಿದನು.

ಭಯದ ಸೂಚನೆಯೇ ಇಲ್ಲದೆ ವಿಭೀಷಣನು ಬಳಿಗೆ ಬಂದನು. "ನಾನು ವಿಭೀಷಣ, ರಾವಣನ ತಮ್ಮ. ಸೀತೆಯನ್ನು ಹಿಂದಕ್ಕೆ ಕಳುಹಿಸುವಂತೆ ನಾನು ಅವನಿಗೆ ಬುದ್ಧಿ ಹೇಳಿದೆ. ಆದರೆ ಅವನಿಗೆ ಎಷ್ಟು ಕೋಪ ಬಂದಿತು ಎಂದರೆ ನಾನು ಜೀವ ಉಳಿಸಿಕೊಳ್ಳಲು ಓಡಿ ಬರಬೇಕಾಯಿತು. ನಾನು ಪ್ರಭು ರಾಮನನ್ನು ಕಾಣಬೇಕು," ಎಂದ.

ಸುಗ್ರೀವನು ರಾಮನೂ ಇತರ ನಾಯಕರೂ ಇದ್ದೆಡೆಗೆ ಹೋಗಿ ಹೇಳಿದ, "ಅವನನ್ನು ನಂಬಬಾರದು. ಅವನಲ್ಲಿ ಏನೋ ಮೋಸವಿರಬಹುದು."

"ಅವನನ್ನು ನಂಬುವ ಮೊದಲು ಪರೀಕ್ಷೆ ಮಾಡಿನೋಡೋಣ" ಅಂಗದ ಸಲಹೆ ಮಾಡಿದ.

ಇನ್ನು ಕೆಲವರು, "ಕೊಲ್ಲಿ ಅವನನ್ನು ! ಕೊಲ್ಲಿ ! ನಮ್ಮನ್ನು ನಾಶ ಮಾಡುವುದಕ್ಕೇ ಅವನು ಬಂದಿದ್ದಾನೆ," ಎಂದು ಕೂಗಾಡಿದರು.

ಹನುಮಂತನೊಬ್ಬನೇ ನಿರಾತಂಕದಿಂದಿದ್ದನು. "ಬೇಡ, ಅವನನ್ನು ನಾವು ನಂಬಬಹುದು ಎಂದು ನನಗೆ ತೋರುತ್ತದೆ. ಅವನು ತನ್ನ ಹಿತವೃಷ್ಟಿಯಿಂದ ಬಂದಿದ್ದಾನೆ; ಪ್ರಾಯಶಃ ರಾವಣನು ಸೋತು ತಾನು ಸಿಂಹಾಸನವನ್ನು ಏರಬೇಕೆಂದು ಅವನ ಬಯಕೆ."

ರಾಮನು ಒಪ್ಪಿದ. "ಶರಣಾಗತರಾಗಿ ಬಂದವರಿಗೆ ಸಹಾಯ ಮಾಡುತ್ತೇನೆ ಎಂದು ನನ್ನ ಪ್ರತಿಜ್ಞೆ, ಅವನನ್ನು ಕರೆತನ್ನಿ. ಅವನು ರಾವಣನೇ ಆದರೂ ಅವನನ್ನು ಸೇರಿಸಿಕೊಳ್ಳುತ್ತೇನೆ."

ವಿಭೀಷಣನನ್ನು ರಾಮನ ಬಳಿಗೆ ಕರೆತಂದರು. ಆ ಕ್ಷಣದಿಂದ ಅವನು ರಾಮನ ಸೇವೆಯನ್ನು ನಿಷ್ಠೆಯಿಂದ ಮಾಡಿದ. ಲಂಕೆಯ ವಿಷಯ, ಅದನ್ನು ಹೇಗೆ ಸಮೀಪಿಸಿ ಆಕ್ರಮಿಸಬಹುದು ಎಂಬ ವಿಷಯ ಎಲ್ಲವನ್ನೂ ರಾಮನಿಗೆ ವಿವರವಾಗಿ ತಿಳಿಸಿದನು.

"ಅಷ್ಟು ಅಗಲವಿಲ್ಲದ ಕಡೆ ನೀರಿನ ಮೇಲೆ ಸೇತುವೆ ಕಟ್ಟಿ, ಪ್ರಭೂ, ನಿಮ್ಮ ಸೈನ್ಯ ದಾಟಿಹೋಗಲಿ" ಎಂದು ವಿಭೀಷಣ ಸಲಹೆ ಮಾಡಿದ. ರಾವಣನನ್ನು ಸೋಲಿಸಿದ ನಂತರ ವಿಭೀಷಣನನ್ನು ಲಂಕೆಯ ರಾಜನನ್ನಾಗಿ ಮಾಡುವುದಾಗಿ ರಾಮನು ವಾಗ್ದಾನ ಮಾಡಿದ.

ಬಂಡೆ, ಕಲ್ಲು, ಮರ, ಮರಳು, ಮಣ್ಣು ಎಲ್ಲವನ್ನೂ—ಕೈಗೆ ಸಿಕ್ಕಿದುದೆಲ್ಲವನ್ನೂ—ಉಪಯೋಗಿಸಿ ಅವರು ಸೇತುವೆಯನ್ನು ಕಟ್ಟಲು ಪ್ರಾರಂಭಿಸಿದರು. ಕಾಲವೇ ಬೇಕಾಗಿರಲಿಲ್ಲ ಎನ್ನುವಂತೆ ಸೇತುವೆ ಸಿದ್ಧವಾಯಿತು. ರಾಮನ ಸೈನ್ಯವು ಸಮುದ್ರ ದಾಟಿ ಲಂಕೆಗೆ ಹೋಯಿತು. ದೀರ್ಘ ಕಾಲದ, ಭೀಕರ ಯುದ್ಧ ಪ್ರಾರಂಭವಾಯಿತು. ಎರಡು ಸೈನ್ಯಗಳ ಶ್ರೇಷ್ಠ ಯೋಧರೂ ಹೋರಾಡುತ್ತ ಒಬ್ಬರ ನಂತರ ಒಬ್ಬರು ಉರುಳಿದರು. ರಾವಣನ ದುಃಖ ಮೇರೆಮೀರಿತು. ಒಟ್ಟಿಗೆ ಆರು ತಿಂಗಳ ಕಾಲ ನಿದ್ರೆ ಮಾಡಿ, ಏಳುತ್ತಲೇ ಹೊಟ್ಟೆಬಾಕನಾಗಿ ತಿನ್ನುತ್ತಿದ್ದ ಮಹಾವೀರ ಕುಂಭಕರ್ಣನೂ ಯುದ್ಧಭೂಮಿಯಲ್ಲಿ ಸತ್ತ.



ಅನಂತರ ಇಂದ್ರಜಿತುವಿನ ಸರದಿ. ಅವನು ರಾವಣನ ಮಕ್ಕಳಲೆಲ್ಲ ದೊಡ್ಡವನು, ಧೀರ. ಶ್ರೇಷ್ಠ. ಅವನನ್ನು ಸೋಲಿಸುವುದು ಯಾರಿಗೂ— ದೇವತೆಗಳ ರಾಜ ಇಂದ್ರನಿಗೂ—ಸಾಧ್ಯವಿರಲಿಲ್ಲ. ವಿಭೀಷಣನು ತೋರಿಸಿಕೊಟ್ಟ ಸುರಂಗಮಾರ್ಗದಿಂದ ರಾವಣನ ಅರಮನೆಯ ಗುಪ್ತ ಮಂದಿರಗಳನ್ನು ಹೊಕ್ಕ ಲಕ್ಷ್ಮಣನ ಕೈಯಲ್ಲಿ ಇಂದ್ರಜಿತು ಹತನಾದ.

ಯುದ್ಧ ಮುಗಿಯುವ ಹೊತ್ತಿಗೆ ರಾವಣನ ಚಿನ್ನದ ನಗರ ಹಾಳಾಗಿ ಹೋಗಿದ್ದಿತು. ಅವನು ಬಹುವಾಗಿ ಪ್ರೀತಿಸುತ್ತಿದ್ದ ಮಗ ಇಂದ್ರಜಿತು ತೀರಿಕೊಂಡಿದ್ದ. ದುಃಖದಿಂದ ಮೈಮರೆತು ರಾವಣನು ಸೀತೆಯತ್ತ ನುಗ್ಗಿದ. ಆದರೆ ಅವನ ಮಂತ್ರಿಗಳು ಅವನನ್ನು ತಡೆದರು. "ಗಂಡಸು ಎನ್ನಿಸಿಕೊಳ್ಳುವ ಯೋಗ್ಯತೆ ಇರುವವನು ಹೆಂಗಸರನ್ನು ಕೊಲ್ಲುವುದಿಲ್ಲ. ರಾಮನನ್ನು ಯುದ್ಧಕ್ಕೆ ಕರೆ" ಎಂದರು.

ಹೀಗೆ ರಾಮ ರಾವಣರು ಯುದ್ಧಭೂಮಿಯಲ್ಲಿ ಎದುರಾದರು. ರಾವಣ ರಾಮನ ಕಡೆ ಹೋರಾಡುತ್ತಿದ್ದ ವಿಭೀಷಣನನ್ನು ನೋಡಿದ. ದ್ರೋಹಿ ಎಂದು ಅವನನ್ನು ಶಪಿಸಿ. ಅವನನ್ನು ಕೊಲ್ಲದ ಬಿಡದ ಮಾಯಾ ಶಸ್ತ್ರ ಶಕ್ತ್ಯಾಯುಧವನ್ನು ಅವನತ್ತ ಎಸೆದ.



ಲಕ್ಷ್ಮಣನು ತನ್ನ ದೇಹವನ್ನೆ ಅಡ್ಡ ತಂದು ಉಳಿಸದೆ ಹೋಗಿದ್ದರೆ ವಿಭೀಷಣನು ಸತ್ತು ಹೋಗುತ್ತಿದ್ದ. ಶಸ್ತ್ರ ಲಕ್ಷ್ಮಣನನ್ನು ಕೆಳಕ್ಕುರುಳಿಸಿತು, ರಾಮನ ಕಣ್ಣುಗಳು ಬೆಂಕಿಯನ್ನು ಕಾರಿದವು. ಲಕ್ಷ್ಮಣನನ್ನು ಇತರರ ಆರೈಕೆಗೆ ಬಿಟ್ಟು ರಾಮನು ರಾವಣನನ್ನು ಎದುರಿಸಿದ.

ಸಾಯುವ ವರೆಗಿನ ಹೋರಾಟ ಅದು, ಕೆಟ್ಟ ಶಕ್ತಿಗಳನ್ನು ಎದುರಿಸಿದ ಒಳ್ಳೆಯ ಶಕ್ತಿಗಳ ಕಟ್ಟಕಡೆಯ ಹೋರಾಟ. ಎರಡು ಸೈನ್ಯಗಳ ಯೋಧರೂ ತಮ್ಮ ಆಯುಧಗಳನ್ನು ಕೆಳಗಿಟ್ಟು ನೋಡುತ್ತ ನಿಂತರು. ಇಂತಹ ಕಾಳಗವನ್ನು ಅವರು ಹಿಂದೆಂದೂ ಕಂಡಿರಲಿಲ್ಲ. ಇಬ್ಬರು ವೀರರೂ ಧೈರ್ಯದಿಂದ ಹೋರಾಡಿದರು. ತಮ್ಮ ಶಕ್ತಿ ಎಲ್ಲವನ್ನೂ ಬುದ್ಧಿ ಎಲ್ಲವನ್ನೂ ಬಳಸಿ ಹೋರಾಡಿದರು.

ಕಡೆಗೆ ರಾವಣನು ಸತ್ತ. ಅವನ ರಾಕ್ಷಸರು ದಿಕ್ಕುಗೆಟ್ಟು ಓಡಿಹೋದರು. ಲಂಕೆ ಶರಣಾಗತವಾಯಿತು. ರಾಮನ ವಾನರ ಯೋಧರು ಸಂತೋಷದಿಂದ ಕುಣಿದು ಕುಪ್ಪಳಿಸಿ ಕೂಗಾಡಿದರು. ರಾಮನು ವಿಭೀಷಣನಿಗೆ, "ಗೆಳೆಯ, ರಾವಣನಿಗೆ ಅವನ ಹಿರಿಯತನಕ್ಕೆ ಯೋಗ್ಯವಾದ ರೀತಿಯಲ್ಲಿ ಸಂಸ್ಕಾರ ಮಾಡು. ನಾನೂ ಬರುತ್ತೇನೆ. ಸಾವಿನ ನಂತರ ಹಗೆಯಿಲ್ಲ" ಎಂದು ಹೇಳಿದನು.

ರಾಮನು ಹನುಮಂತನನ್ನು ಕರೆದನು. "ಸೀತೆಯ ಬಳಿಗೆ ಹೋಗಿ ಅವಳಿಗೆ ಎಲ್ಲವನ್ನೂ ತಿಳಿಸು" ಎಂದು ಹೇಳಿದನು.

ರಾಮನ ವಿಜಯದ ವಾರ್ತೆ ತಿಳಿದು ಸೀತೆಗೆ ಸಂತೋಷ ಉಕ್ಕಿತು. ರಾಮನನ್ನು ಕೂಡಲೇ ಕಾಣುವ ತವಕ ಅವಳಿಗೆ. ಆದರೆ ತನ್ನ ಹೆಂಡತಿ ಸ್ನಾನ ಮಾಡಿ, ಸುಗಂಧಗಳನ್ನೂ ಸುಂದರ ವಸ್ತ್ರಗಳನ್ನೂ ಒಡವೆಗಳನ್ನೂ ಧರಿಸಿ ಬರಬೇಕು ಎಂದು ರಾಮನು ಹೇಳಿದ್ದನು. ಸೀತೆ ತನ್ನ ಪ್ರಭುವನ್ನು ಕಾಣಲು ಸಿದ್ಧಳಾದಳು.

ಸೀತೆಗೆ ಚಿತ್ರಹಿಂಸೆ ಮಾಡುತ್ತಿದ್ದ ರಾಕ್ಷಸಿಯರನ್ನು ತೋರಿಸಿ ಹನುಮಂತ ಕೇಳಿದ. "ಈ ಪ್ರಾಣಿಗಳನ್ನು ಏನು ಮಾಡೋಣ? ಅವರನ್ನೆಲ್ಲ ಕೊಂದುಬಿಡಲೆ?"

"ಬೇಡ." ಸೀತೆ ಎಂದಳು, "ಅವರು ತಮ್ಮ ಒಡೆಯನ ಅಪ್ಪಣೆಯನ್ನು ಪರಿಪಾಲಿಸುತ್ತಿದ್ದರು, ಅಷ್ಟೆ."

ನೋವು, ವಿರಹ, ದುಃಖ ಮತ್ತು ರಕ್ತಪಾತದ ಒಂದು ವರ್ಷವನ್ನು ಕಳೆದು ಕಡೆಗೂ ರಾಮ ಸೀತೆಯರು ಒಬ್ಬರನ್ನೊಬ್ಬರು ಕಂಡರು.

# ಅಯೋಧ್ಯೆಗೆ ರಾಮನ ಪ್ರಯಾಣ

ಈಗ ವಿಭೀಷಣ ಲಂಕೆಯ ರಾಜ. ಅವನಿಗೆ ರಾಮನಲ್ಲಿ ಭಕ್ತಿ. ಅವನು ಲಂಕೆಯಿಂದ ಹೊರಡುವುದು ವಿಭೀಷಣನಿಗೆ ಇಷ್ಟವಿಲ್ಲ.

"ಇಲ್ಲಿ ಸ್ವಲ್ಪ ಕಾಲವಾದರೂ ನಿಲ್ಲಿ," ಅವನು ಬೇಡಿದ.

"ಇಲ್ಲ," ರಾಮ ಹೇಳಿದ. "ರಾಜ್ಯವನ್ನು ಬಿಟ್ಟು ನಾನು ಹದಿನಾಲ್ಕು ವರ್ಷಗಳನ್ನು ಕಳೆದಿದ್ದೇನೆ. ನನಗಾಗಿ ಭರತನು ಅಯೋಧ್ಯೆಯಲ್ಲಿ ಕಾದಿದ್ದಾನೆ. ನಾನು ಹಿಂದಕ್ಕೆ ಹೋಗುವುದು ತಡವಾದರೆ ಅವನು ಅಗ್ನಿಯಲ್ಲಿ ಬಿದ್ದು ಪ್ರಾಣಬಿಡುತ್ತಾನೆ."

"ಹಾಗಾದರೆ ನಾನು ನಿನ್ನೊಡನೆ ಬಂದು ನಿನ್ನ ಪಟ್ಟಾಭಿಷೇಕವನ್ನು ನೋಡಲು ಅನುಮತಿ ಕೊಡು," ವಿಭೀಷಣ ಹೇಳಿದ.



ಸುಗ್ರೀವನಿಗೂ ಹೋಗುವ ಆಸೆ. ಅವರೆಲ್ಲರೂ ರಾವಣನ ರಥ "ಪುಷ್ಪಕ ವಿಮಾನ"ದಲ್ಲಿ ಕುಳಿತು ಹಿಂದಿರುಗಿದರು. ರಾತ್ರಿಯನ್ನು ಪ್ರಯಾಗದಲ್ಲಿ ಭಾರದ್ವಾಜ ಋಷಿಗಳ ಆಶ್ರಮದಲ್ಲಿ ಕಳೆದರು.

ತಮ್ಮ ಆಗಮನವನ್ನು ಭರತನಿಗೆ ತಿಳಿಸಲು ಅಲ್ಲಿಂದ ರಾಮನು ಹನುಮಂತನನ್ನು ಕಳುಹಿಸಿದ. ರಾಮನು ಹನುಮಂತನಿಗೆ, "ಭರತನ ಮುಖವನ್ನು ಎಚ್ಚರಿಕೆಯಿಂದ ನೋಡುತ್ತಿರು, ನಾವು ಹಿಂದಕ್ಕೆ ಬರುವುದು ಅವನಿಗೆ ನಿಜವಾಗಿ ಸಂತೋಷವೇ ಎಂದು ನೋಡು. ಅವನಿಗೆ ರಾಜ್ಯದ ಆಸೆ ಇರಬಹುದು. ಹಾಗೆ ಆಸೆ ಇದ್ದರೆ ಅವನೇ ರಾಜ್ಯವನ್ನು ಇಟ್ಟುಕೊಳ್ಳಲಿ" ಎಂದು ಹೇಳಿದ.

ಆದರೆ, ಹನುಮಂತನು ಭರತನಿಗೆ ಈ ಒಳ್ಳೆಯ ಸುದ್ದಿಯನ್ನು ತಿಳಿಸುತ್ತಲೇ ಅವನ ಸಂತೋಷ ಉಕ್ಕಿ ಹರಿಯಿತು. ತನ್ನ ಮುಖ್ಯ ಅಧಿಕಾರಿಗಳನ್ನು ಕರೆದು ವೈಭವದ ಸ್ವಾಗತಕ್ಕೆ ಸಿದ್ಧತೆ ಮಾಡುವಂತೆ ಅಪ್ಪಣೆ ಮಾಡಿದ. ರಾಮನು ನಂದೀ ಗ್ರಾಮವನ್ನು ತಲುಪಿದಾಗ ಅವನಿಗೆ ಸಂಭ್ರಮದ ಸ್ವಾಗತ ದೊರಕಿತು. ರಾಮ, ಲಕ್ಷ್ಮಣ ಮತ್ತು ಭರತರು ಋಷಿಗಳ ಉಡುಪುಗಳನ್ನು ತ್ಯಜಿಸಿ, ಮತ್ತೆ ರಾಜಕುಮಾರರ ಉಡುಪುಗಳನ್ನು ಧರಿಸಿದರು. ತಮ್ಮ ಸ್ನೇಹಿತರು ಮತ್ತು ಪರಿವಾರದವರೊಡನೆ ಅಯೋಧ್ಯೆಗೆ ಮೆರವಣಿಗೆಯಲ್ಲಿ ಹೋದರು.

ಮತ್ತೆ ಸುಂದರ ಅಯೋಧ್ಯೆಗೆ ಅಲಂಕಾರವಾಯಿತು. ಕೌಸಲ್ಯೆ, ಸುಮಿತ್ರೆ ಮತ್ತು ಕೈಕೆಯಿಯರು ಅವರನ್ನು ಬರಮಾಡಿಕೊಳ್ಳಲು ತವಕದಿಂದ ಕಾದಿದ್ದರು.

ತಮ್ಮ ಪ್ರೀತಿಯ ರಾಮನ ಮುಖವನ್ನು ಮತ್ತೆ ಕಂಡು ಅಯೋಧ್ಯೆಯ ಜನ ಸಂತೋಷ ದಿಂದ ಹುಚ್ಚರಂತೆ ಆದರು. ಸ್ವಲ್ಪ ಕಾಲದಲ್ಲಿಯೆ, ಬಹು ಸಂಭ್ರಮದಿಂದ ಮತ್ತು ವೈಭವದಿಂದ ರಾಮನ ಪಟ್ಟಾಭಿಷೇಕ ನಡೆಯಿತು. ಅವನು ಸೀತೆಗೆ ಒಂದು ಸುಂದರವಾದ ಚಿನ್ನದ ಹಾರ ವನ್ನು ಕೊಟ್ಟನು; ಅವಳು ಹನುಮಂತನ ಭಕ್ತಿ ಮತ್ತು ಕಲಿತನಕ್ಕೆ ಬಹುಮಾನವೆಂದು ಹಾರ ವನ್ನು ಅವನಿಗೆ ಕೊಟ್ಟಳು.

ರಾಮನು ಬಹು ವರ್ಷಗಳ ಕಾಲ ವಿವೇಕದಿಂದ ಬಹು ಚೆನ್ನಾಗಿ ರಾಜ್ಯವಾಳಿದನು. ಅವನ ಹೆಸರೆಂದರೆ ಎಲ್ಲಾ ಸದ್ಗುಣಗಳ ಆದರ್ಶಮೂರ್ತಿ ಎಂದೇ ಅರ್ಥವಾಗಿ ಹೋಗಿದೆ. ಇವತ್ತಿಗೂ 'ರಾಮರಾಜ್ಯ' ಎಂದರೆ ಎಲ್ಲ ಜನರೂ ಸುಖ ಸಮೃದ್ಧಿಗಳಿಂದ ಇರುವ ರಾಜ್ಯಭಾರ ಎಂದೇ ಅರ್ಥ.

